# ಕೂಶ್ಮಾಂಡ ಮಂತ್ರಾರ್ಥ ದೀಪಿಕಾ



ವಿದ್ವಾನ್. ಸುಬ್ರಾಯ ವಿ. ಭಟ್ಟ
(ಗುಂಜಗೋಡು), ಶೃಂಗೇರಿ

**Kūshmāṇḍa Mantrartha Dīpikā** — A book on a sacrificial ritual (Kushmanda Homa) hymns & Commentary, written by Vidwān Subraya V. Bhatta, Head of the Department of Mīmānsa. Rajiva Gandhi Kendriya Sanskrit Vidyapeetha, Shringeri.

*Published by :* **Vidwān Subraya V. Bhatta** (Gunjagod)
C/o. Sudarshana Prakashana
"Vidhātri", Mallappa Street,
Sringeri, Chikamagalore District
Pin-577139
Ph.Res : 08265-250538
Vidyapeetha - Ph.: 250258
Mobile : 94491 60458



No. of Pages : xvi+64

No of Copies : 2000

First Print : 2001
Second Print : 2004
Third Print : 2011

Price Rs. : 40/-

*Typeset & Printed at :*
**Vagārtha,** 149, 8th Cross, N.R. Colony,
Bangalore-560 019. Ph.: 2242 7677. vagartha@yahoo.com

# ಗ್ರಂಥ ಸಮರ್ಪಣೆ

*ಪೂಜ್ಯ ತಂದೆ-ತಾಯಿಯವರ ಸ್ಮರಣಾರ್ಥ*

ಜನನ : 17-7-1929 ಜನನ : 17-1-1917



ದಿ॥ ಮಹಾದೇವಿ ದಿ॥ ವೆಂಕಟರಮಣ ಭಟ್ಟರು

ಮರಣ : 4-8-2000

ॐ

॥ श्री शृङ्गेरी श्रीजगद्गुरुमहासंस्थानम् ॥



श्रीमत्परमहंसपरिव्राजकाचार्यवर्य पदवाक्यप्रमाणपारावारपारीण यमनियमासन-प्राणायामप्रत्याहारधारणाध्यानसमाध्यष्टाङ्गयोगानुष्ठाननिष्ठ तपश्चक्रवर्त्यनाद्यविच्छिन्न श्रीशङ्कराचार्यगुरुपरम्पराप्राप्त षड्दर्शनस्थापनाचार्य व्याख्यानसिंहासनाधीश्वर सकल निगमागमसारहृदय सांख्यत्रयप्रतिपादक वैदिकमार्गप्रवर्तक सर्वतन्त्रस्वतन्त्रादि-राजधानीविद्यानगरमहाराजधानीकर्णाटकसिंहासनप्रतिष्ठापनाचार्य श्रीमद्राजाधिराज-गुरुभूमण्डलाचार्य ऋष्यशृङ्गपुरवराधीश्वर तुङ्गभद्रातीरवासि श्रीमद्विद्याशङ्कर-पादपद्माराधक श्रीजगद्गुरु श्रीमदभिनवविद्यातीर्थस्वामिगुरुकरकमलसञ्जात

## ॥ श्री जगद्गुरु शृङ्गेरी श्रीमद्भारतीतीर्थस्वामिभिः ॥

अस्मदत्यन्तप्रियशिष्य पण्डित सुब्रायभट्टविषये नारायणस्मरणपुरस्सरं विरचिता आशिषः समुल्लसन्तु ।

ಪಾಪ ಪರಿಹಾರಕ್ಕಾಗಿ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತ ಕರ್ಮಗಳಲ್ಲಿ ಕೂಶ್ಮಾಂಡ ಹೋಮವು ಪ್ರಧಾನವಾದುದಾಗಿದೆ. ಈ ಹೋಮ ಮಂತ್ರಗಳು ತೈತ್ತಿರೀಯಾರಣ್ಯಕ ಮತ್ತು ತೈತ್ತಿರೀಯ ಬ್ರಾಹ್ಮಣದಲ್ಲಿ ಪಠಿತವಾಗಿವೆ. ಸಾಮಾನ್ಯವಾಗಿ ಹಲವರು ಕೂಶ್ಮಾಂಡ ಹೋಮ-ವನ್ನು ಮಾಡಿದರೂ ಆ ಮಂತ್ರಾರ್ಥವನ್ನು ತಿಳಿದಿರುವುದಿಲ್ಲ. ಅರ್ಥಜ್ಞಾನ ಪೂರ್ವಕವಾಗಿ ಮಾಡಿದ ಕರ್ಮವು ವಿಶೇಷ ಫಲಪ್ರದವೆಂದು 'ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ' ಎಂದು ಶ್ರುತಿಯು ಹೇಳುತ್ತದೆ. ಆದುದರಿಂದ ಈ ಮಂತ್ರಗಳ ಅರ್ಥಜ್ಞಾನ ಪುರಸ್ಸರವಾಗಿ ಹೋಮ ಮಾಡುವುದು ತುಂಬಾ ಶ್ರೇಷ್ಠವಾಗುತ್ತದೆ.

ಈ ಅಭಿಪ್ರಾಯದಿಂದ ನೀವು ಕೂಶ್ಮಾಂಡಹೋಮ ಮಂತ್ರಗಳಿಗೆ ಸಾಯಣ ಭಾಷ್ಯಾನುಸಾರವಾಗಿ ಅರ್ಥ ವಿವರಣೆ ಮಾಡಿರುವ **'ಕೂಶ್ಮಾಂಡ ಮಂತ್ರಾರ್ಥ ದೀಪಿಕಾ'** ಎಂಬ ಗ್ರಂಥವನ್ನು ರಚಿಸಿ ನಮಗೆ ತೋರಿಸಿದ್ದೀರಿ. ನಾವು ಅದನ್ನು ನೋಡಿ ಸಂತೋಷ ಪಟ್ಟಿದ್ದೇವೆ. ಈ ಗ್ರಂಥವು ಆಸ್ತಿಕರಿಗೆ ಅತ್ಯಂತೋಪಕಾರಕವಾಗುತ್ತದೆ.

ಶ್ರೀಶಾರದಾ ಚಂದ್ರಮೌಳೀಶ್ವರರ ಕೃಪೆಯಿಂದ ಈ ಗ್ರಂಥವು ವಿಶೇಷ ಪ್ರಚಾರವನ್ನು ಹೊಂದಲಿ ನಿಮಗ ಸಕಲ ಶ್ರೇಯಸ್ಸುಗಳು ಲಭಿಸಲಿ ಎಂದು ಆಶೀರ್ವದಿಸುತ್ತೇವೆ.

**ಇತಿ ನಾರಾಯಣ ಸ್ಮರಣಂ**

ಶೃಂಗೇರಿ
ವೃಷ ವತ್ಸರೀಯ ಜ್ಯೇಷ್ಠ ಕೃಷ್ಣ ದ್ವಿತೀಯಾ
ಭಾರ್ಗವ ವಾಸರಃ। 8.6.2001





॥ ಪ್ರಸೀದತು ಶ್ರೀರಾಮಚಂದ್ರಃ ॥



श्रीराम: ಗತಾ ಸಂಖ್ಯಾ : 1172

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ
ಪಾರಾವಾರಪಾರೀಣ ಯಮನಿಯಮಾಸನ
ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ
ಷಡ್ದರ್ಶನಸ್ಥಾಪನಾಚಾರ್ಯ ತಪಶ್ಚಕ್ರವರ್ತ್ಯಾದ್ಯನೇಕ ವಿಶೇಷಣವಿಶಿಷ್ಟ

**ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶಿಷ್ಯ**

ಶ್ರೀ ಸುರೇಶ್ವರಾಚಾರ್ಯ ಜ್ಯೇಷ್ಠಶಿಷ್ಯ ವಿದ್ಯಾನಂದಾಚಾರ್ಯಾಽವಿಚ್ಛಿನ್ನ
ಗುರುಪರಂಪರಾಪ್ರಾಪ್ತ ಸಕಲ ನಿಗಮಾಗಮಸಾರಹೃದಯ
ಸಾಂಖ್ಯತ್ರಯಪ್ರತಿಪಾದಕ ವೈದಿಕಮಾರ್ಗಪ್ರವರ್ತಕ ಸರ್ವತಂತ್ರಸ್ವತಂತ್ರಾದಿ
ಬಿರುದಾಂಕಿತ ವಿದ್ಯಾನಗರ ಮಹಾರಾಜಧಾನೀ ವೈಭವ
ಸಿಂಹಾಸನಾಧೀಶ್ವರ ವಿಖ್ಯಾತವ್ಯಾಖ್ಯಾನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜಗುರು

**ಶ್ರೀ ಗೋಕರ್ಣ ಮಂಡಲಾಚಾರ್ಯ**

ಶ್ರೀಮಚ್ಛತಶೃಂಗಪುರವರಾಧೀಶ್ವರ ಶ್ರೀಮಚ್ಛರಾವತೀತೀರವಾಸ
ಶ್ರೀಮದ್ರಾಮಚಂದ್ರಾಪುರಮಠಸ್ಥ ಶ್ರೀಮದ್ರಾಮಚಂದ್ರ ಚಂದ್ರಮೌಳೀಶ್ವರ
ಪಾದಪದ್ಮಾರಾಧಕ ಶ್ರೀಮದ್ರಾಘವೇಂದ್ರ ಭಾರತೀ ಶ್ರೀಗುರುಕರಕಮಲಸಂಜಾತ

**ಶ್ರೀಮದ್ರಾಘವೇಶ್ವರ ಭಾರತೀ ಶ್ರೀ ಸ್ವಾಮಿಭಿಃ**

ಅಸ್ಮದತ್ಯಂತ ಪ್ರಿಯಶಿಷ್ಯರಾದ ವಿದ್ವಾನ್ ಸುಬ್ರಾಯಭಟ್ಟ ಗುಂಜಗೋಡು, ಪ್ರಾಧ್ಯಾಪಕರು, ಮೀಮಾಂಸಾ ವಿಭಾಗ, ರಾಜೀವಗಾಂಧೀ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ, ಶೃಂಗೇರಿ, ಏತೇಷಾಂ ವಿಷಯೇ ಶ್ರೀಮನ್ನಾರಾಯಣ ಸ್ಮರಣಪುರಃಸ್ಸರಂ ಸಂದಿಷ್ಟೋಽಯಂ ಸಂದೇಶಃ.

ಅದಾಗಿ, ಶ್ರೀಸವಾರಿಯು ಆರಾಧ್ಯ ಶ್ರೀಸೀತಾರಾಮಚಂದ್ರ ಚಂದ್ರಮೌಳೀಶ್ವರ ರಾಜರಾಜೇಶ್ವರೀ ದೇವತಾ ದಿವ್ಯ ಸನ್ನಿಧಿಯಲ್ಲಿ ಅನುದಿನವೂ ಸಮಸ್ತ ಜನತೆಯ ಯೋಗಕ್ಷೇಮಗಳನ್ನು ಸಂಪ್ರಾರ್ಥಿಸುತ್ತಾ, ಸದ್ಯ ಈ ಮುಕ್ಕಾಮಿನಲ್ಲಿ ಕ್ಷೇಮದಿಂದ ವಸತಿ ಮಾಡಿದೆ.

ನೀವು "**ಕೂಶ್ಮಾಂಡ ಮಂತ್ರಾರ್ಥ ದೀಪಿಕಾ**" ಎಂಬ ಶೀರ್ಷಿಕೆಯಡಿಯ ಕೃಷ್ಣ-ಯಜುರ್ವೇದ ತೈತ್ತಿರೀಯ ಆರಣ್ಯಕದ ದ್ವಿತೀಯ ಪ್ರಪಾಠಕದಲ್ಲಿಯ ಮೂರು-ನಾಲ್ಕು-ಐದು ಹಾಗೂ ಆರನೇ ಅನುವಾಕಗಳಲ್ಲಿ ಪ್ರೋಕ್ತವಾದ ಪಾಪಪರಿಹಾರವೇ ಫಲವಾಗಿ

ಉಳ್ಳ, ಕೂಶ್ಮಾಂಡ ಮಂತ್ರಗಳಿಂದು ಪ್ರಸಿದ್ಧಿಪಡೆದ, ಮಂತ್ರಭಾಗವನ್ನು ಕನ್ನಡಾನುವಾದ ಮಾಡಿ ಅನುಷ್ಠಾನೋಪಯೋಗಿಯಾಗುವಂತೆ ಸ್ವಾಹಾಕಾರ ಹಾಗೂ ಬೋಧಾಯನೀಯ ಹೋಮಪ್ರಯೋಗ ಸಹಿತ ಪ್ರಕಟಿಸಲಿರುವ ಸಂಗತಿ; ಈ ಗ್ರಂಥಕ್ಕೆ ಆಶೀರ್ವಾದ ಸಂದೇಶಕ್ಕೆ ನಿವೇದಿಸಿದ್ದು ಸಹ ವೇದ್ಯವಾಗಿ ಹರ್ಷಿಸಿದೆವು.

ವೇದಗಳು ಸೃಷ್ಟಿಯ ಯಥಾರ್ಥ ತತ್ತ್ವಗಳನ್ನೂ ಅಲ್ಲದೆ ಅಲೌಕಿಕ ಫಲ, ತತ್ಸಾಧನ ವಿಶೇಷಗಳನ್ನೂ ವಿಶದಪಡಿಸುವ ಅನನ್ಯಸದೃಶ ಜ್ಞಾನರಾಶಿಯೆಂಬುದನ್ನು ಅರಿತು ಮಹರ್ಷಿಗಳು ಮುಂದಿನ ಪೀಳಿಗೆಗೆ ಉಪದೇಶಿಸಿ ಉಪಕರಿಸಿರುವುದು ಸರ್ವವೇದ್ಯ.

ಇಂತಹ ಮಹತ್ವಪೂರ್ಣವೂ, ಪರಮಪವಿತ್ರವೂ, ಆದ ವೇದವು ತಲತಲಾಂತರ-ಗಳಿಂದ ಗುರುಪರಂಪರೆಯ ಮೂಲಕ ಬಂದು ''ಶ್ರುತಿ''ಯೆಂದು ಪ್ರಸಿದ್ಧಿ ಪಡೆದಿದೆ.

ಇವುಗಳಲ್ಲಿ ಪ್ರಾಯಶ್ಚಿತ್ತ ವಿಭಾಗಕ್ಕೆ ಸೇರಿದ ಈ ಕೂಶ್ಮಾಂಡ ಮಂತ್ರಗಳಂತೂ, ಸೃಷ್ಟಿಕರ್ತ-ನನ್ನೂ, ಅಗ್ನ್ಯಾದಿ ದೇವತೆಗಳನ್ನೂ, ಸ್ತುತಿಸಿ ಮನೋವಾಕ್ಕಾಯಗಳಿಂದ ಜನ್ಮಜನ್ಮಾಂತರ-ಗಳಲ್ಲೂ, ಘಟಿಸಿದ ಪಾಪಗಳನ್ನು ಪರಿಹರಿಸಿರೆಂದು ಬೇಡುವಂತಹವುಗಳಾಗಿವೆ.

ಇವುಗಳಿಗೆ ನೀವು ಸಾಯಣಭಾಷ್ಯಾನುಸಾರಿ ಅರ್ಥವನ್ನು ಬರೆದು ಪ್ರಕಟಿಸುತ್ತಿರುವುದು ಪ್ರಶಂಸನೀಯವೂ, ವೈದಿಕರಿಗೆಲ್ಲ ಅತ್ಯವಶ್ಯ ಪ್ರಯೋಜನಕಾರಿಯೂ, ಅಪೇಕ್ಷಿತವೂ, ಆಗಿರುವುದಲ್ಲದೆ ಆಸ್ತಿಕರೆಲ್ಲ ಅತ್ಯಾದರದಿಂದ ಸ್ವಾಗತಿಸುವ ವಿಷಯವಾಗಿದೆ.

ನಿಮ್ಮೀ ಪವಿತ್ರಕಾರ್ಯವು ಯಥೋಚಿತ ನೆರವೇರಲೆಂದೂ, ಇದರ ಪ್ರಯೋಜನವನ್ನು ಕನ್ನಡಿಗರೆಲ್ಲ ಪಡೆದು ಪುನೀತರಾಗಿ ಸುಖಭಾಜನರಾಗಲೆಂದೂ, ನಿಮಗೆ ಇಂತಹ ಅನೇಕ ಸದ್ಗ್ರಂಥಗಳನ್ನು ಪ್ರಕಾಶಿಸುವ ಸಾಮರ್ಥ್ಯವನ್ನು ಸರ್ವಶಕ್ತನು ನೀಡಿ ಅನುಗ್ರಹಿಸ-ಲೆಂದೂ ಆರಾಧ್ಯ ಶ್ರೀಸೀತಾರಾಮಚಂದ್ರಾದಿ ದೇವತಾ ದಿವ್ಯಸನ್ನಿಧಿಯಲ್ಲಿ ಸಂಪ್ರಾರ್ಥಿಸಿ ಹರಸುತ್ತೇವೆ.

ಇತಿ ನಾರಾಯಣ ಸ್ಮೃತಯಃ

ಮಿತಿ- ಶ್ರೀವೃಷಸಂ/ದ ಜ್ಯೇಷ್ಠಬಹುಳ 8/ಯು ಗುರುವಾರ ದಿನಾಂಕ 14-6-2001
ವಸತಿ- ವಿದ್ಯಾಮಂದಿರ, ಗಿರಿನಗರ, ಬೆಂಗಳೂರು-85

श्री लक्ष्मीनृसिंहः





श्री नारायणः
ವೃಷ ಸಂ.ದ ಜ್ಯೇಷ್ಠ
ಬಹುಳ ಬಿದಿಗೆಯು
ಶುಕ್ರವಾರ
ದಿನಾಂಕ : 8-6-2001

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ
ಪಾರಾವಾರಪಾರೀಣ ಯಮನಿಯಮಾಸನ
ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ
ಷಣ್ಮತವ್ಯವಸ್ಥಾಪನಾಚಾರ್ಯ, ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ
ಶ್ರೀ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶಿಷ್ಯ
ಶ್ರೀ ಭಾಸ್ಕರೇಂದ್ರ ಸರಸ್ವತೀ ಕರಕಮಲ ಸಂಜಾತ
ಶ್ರೀ ಶ್ರೀಮತ್ ವಿಶ್ವವಂದ್ಯ ಸರಸ್ವತೀ
ಗುರುಪರಂಪರಾಪ್ರಾಪ್ತ ಸಕಲನಿಗಮಾಗಮಸಾರಹೃದಯ ಸಾಂಖ್ಯತ್ರಯಪ್ರತಿಪಾದಕ
ಕ್ರಮಾಗತಶ್ರೌತಸ್ಮಾರ್ತಕರ್ಮಮಾರ್ಗವ್ಯವಸ್ಥಾಪಕ,
ಅಶೇಷತ್ರಯ್ಯಂತಾದ್ಯದ್ವೈತ ಸಿದ್ಧಾಂತಪ್ರಬಂಧ
ಪ್ರವರ್ತಕತ್ವಾದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ
ಶ್ರೀಮತ್ ಸುಧಾಪುರವರಸಿಂಹಾಸನಾಧೀಶ್ವರ
ಸರ್ವತಂತ್ರಸ್ವತಂತ್ರ ವ್ಯಾಖ್ಯಾನ ಸಿಂಹಾಸನಾಧಿಷ್ಠಿತ,
ರಾಜಾಧಿರಾಜದೇಶಿಕ ಗೋಕರ್ಣಮಂಡಲಾಧೀಶ,
ಸಹ್ಯಾದ್ರಿಪುರವರಾಧೀಶ್ವರ, ಶಾಲ್ಮಲೀತೀರವಾಸ, ಶ್ರೀಮಲ್ಲಕ್ಷ್ಮೀನೃಸಿಂಹ
ಚಂದ್ರಮೌಳಿಪದಪಂಕೇರುಹರಸಗ್ರಾಸಾಳಿವನ್ಮಾನಸ ಶ್ರೀಮತ್ ಸೋಂದಾ ಸ್ವರ್ಣವಲ್ಲೀ
ಮಹಾಸಂಸ್ಥಾನಾಧೀಶ್ವರ ಶ್ರೀ ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ
ಶ್ರೀಸ್ವಾಮಿಕರಕಮಲಸಂಜಾತ

## ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀಸ್ವಾಮಿಭಿಃ

ಅಸ್ಮದತ್ಯಂತ ಪ್ರೀತಿಪಾತ್ರರಾದ ವಿದ್ವಾಂಸರಾದ ಶ್ರೀ ಸುಬ್ರಾಯ ಭಟ್ಟರಿಗೆ,

ಶ್ರೀನಾರಾಯಣ ಸ್ಮರಣಪೂರ್ವಕ ಆಶಿಷಃ

ನೀವು **'ಕೂಶ್ಮಾಂಡ ಮಂತ್ರಾರ್ಥ ದೀಪಿಕಾ'** ಗ್ರಂಥವನ್ನು ಪ್ರಕಟಣೆಗೊಳಿಸುತ್ತಿರುವುದಾಗಿ ತಿಳಿದು ಸಂತೋಷವಾಯಿತು.

ಮನುಷ್ಯನು ತಿಳಿದೋ, ತಿಳಿಯದೆಯೋ ಅನೇಕ ತಪ್ಪುಗಳನ್ನು ಮಾಡುತ್ತಾನೆ. ಅವುಗಳಲ್ಲಿ ಅನೇಕ ತಪ್ಪುಗಳಿಗೆ ಪ್ರಾಯಶ್ಚಿತ್ತವನ್ನು ಶಾಸ್ತ್ರಗಳು ತಿಳಿಸುತ್ತವೆ. ಮತ್ತೆ ಅನೇಕ ತಪ್ಪುಗಳಿಗೆ ತಪಸ್ಸು ಪ್ರಾಯಶ್ಚಿತ್ತ. ಭಗವಂತನಲ್ಲಿ ಶುದ್ಧ ಶರಣಾಗತಿ ಎಲ್ಲಾ ತಪ್ಪುಗಳಿಗೂ

ಪ್ರಾಯಶ್ಚಿತ್ತ. ''....ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।'' ಎಂಬುದಾಗಿ ಭಗವಂತನ ವಾಕ್ಯ ಇದೇ ಅಭಿಪ್ರಾಯ ವ್ಯಕ್ತಪಡಿಸುತ್ತದೆ. ಪರಮಾತ್ಮನ ಸಾಕ್ಷಾತ್ಕಾರ ಸಕಲ ಪುಣ್ಯಪಾಪಗಳನ್ನೂ ತೊಳೆದು-ಹಾಕುತ್ತದೆ. ''ಅಪಿಚೇದಸಿ ಸರ್ವೇಭ್ಯಃ ಪಾಪೇಭ್ಯಃ ಪಾಪಕೃತ್ತಮಃ । ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ'' ಎನ್ನುತ್ತದೆ ಗೀತಾವಾಕ್ಯ. ಕೇವಲ ಭಗವಂತನ ಸ್ಮರಣೆಯೂ ಪ್ರಾಯಶ್ಚಿತ್ತ ''ಪ್ರಮಾದಾತ್ ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್ । ತದ್ವಿಷ್ಣೋಃ ಸ್ಮರಣಾದೇವ ಸಂಪೂರ್ಣಂ ಸ್ಯಾದಿತಿಶ್ರುತಿಃ'' ಇವೆಲ್ಲವೂ ಅತ್ಯಂತ ಮೇಲ್ಮಟ್ಟದವರಿಗೆಂದೇ ಹೇಳಬೇಕಾಗುತ್ತದೆ. ಯಾಕೆಂದರೆ ಶುದ್ಧ ಭಾವನೆಯಿಂದ ಭಗವಂತನ ಸ್ಮರಣೆಯೇ ತುಂಬಾ ದುರ್ಲಭ. ಇನ್ನು ಅವನಲ್ಲಿ ಶರಣಾಗತಿ, ಅವನ ಸಾಕ್ಷಾತ್ಕರ ಮತ್ತೂ ದುರ್ಲಭವೇ ಸರಿ.

ಯಾವ ಕಾರಣಗಳಿಂದ ಮನುಷ್ಯ ಪ್ರಾಯಶ್ಚಿತ್ತಕ್ಕೆ ಅರ್ಹನಾಗುತ್ತಾನೆ ಎಂಬುದನ್ನು ಯೋಗಿ ಯಾಜ್ಞವಲ್ಕ್ಯರು ಹೇಳುತ್ತಾರೆ- ''ವಿಹಿತಸ್ಯ ಅನನುಷ್ಠಾನಾತ್ ನಿಂದಿತಸ್ಯ ಚ ಸೇವನಾತ್ ಅನಿಗ್ರಹಾಚ್ಚೇಂದ್ರಿಯಾಣಾಮ್ ನರಃ ಪತನಮೃಚ್ಛತಿ ॥ ತಸ್ಮಾತ್ ತೇನೇಹ ಕರ್ತವ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ । ಏವಮಸ್ಯಾಂತರಾತ್ಮಾ ಚ ಲೋಕಶ್ಚೈವ ಪ್ರಸೀದತಿ ॥'' ಶಾಸ್ತ್ರ ವಿಹಿತವಾದದ್ದನ್ನು ಮಾಡದಿದ್ದುದರಿಂದ, ಶಾಸ್ತ್ರ ನಿಂದಿತವಾದದ್ದನ್ನು ಮಾಡಿದ್ದರಿಂದ ಮತ್ತು ಇಂದ್ರಿಯಗಳನ್ನು ನಿಗ್ರಹಿಸದಿದ್ದುದರಿಂದ ಮನುಷ್ಯ ಪತಿತ-ನಾಗುತ್ತಾನೆ. ಪತಿತತ್ವವನ್ನು ಕಳೆದುಕೊಂಡು ವಿಶುದ್ಧನಾಗಲು ವಿಹಿತವಾದ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಹಾಗೇ ಮಾಡಿಕೊಳ್ಳುವುದರಿಂದ ಆತನ ಅಂತಃಸಾಕ್ಷಿಯೂ ತೃಪ್ತ-ವಾಗುತ್ತದೆ, ಸುತ್ತಲಿನ ಜನತೆಗೂ ಸಮಾಧಾನವಾಗುತ್ತದೆ. ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಭಗವಂತನ ಸಾಕ್ಷಾತ್ಕಾರದ ಮಾರ್ಗದಲ್ಲಿಯೂ ಸರಿಯಾಗಿ ಮುಂದುವರಿಯುವದು ಸಾಧ್ಯವಾಗದು. ಯಾಕೆಂದರೆ ಆ ಮಾರ್ಗದಲ್ಲಿ ಸಾಗಲು ಅಂತರಾತ್ಮದ ಪ್ರಸನ್ನತೆ ತುಂಬಾ ಅವಶ್ಯಕ. ಪಾಪಗಳೇ ಅಂತರಾತ್ಮದ ಪ್ರಸನ್ನತೆಗೆ ಅಡ್ಡಿಯೊಡ್ಡುತ್ತವೆ. ಅವುಗಳನ್ನು ಪ್ರಾಯಶ್ಚಿತ್ತದ ಮೂಲಕ ತೊಳೆದುಕೊಂಡರೆ ಮುಂದೆ ಮಾರ್ಗ ಸುಲಭ.

ಈ ಕಾಲದಲ್ಲಿ ಪ್ರಾಯಶ್ಚಿತ್ತ ಕರ್ಮಗಳ ಬಗ್ಗೆ ಜನತೆಗೆ ಮನವರಿಕೆ ಮಾಡುವುದು ತುಂಬಾ ಅವಶ್ಯವಿದೆ. ಜೊತೆಗೆ ಈ ಕಾಲದ ಜನರು ಒಪ್ಪುವಂತೆ ಕೊಡಬೇಕಾದದ್ದು ಅವಶ್ಯವಿದೆ. ಈ ದೃಷ್ಟಿಯಿಂದ ಅನೇಕ ದೋಷಗಳಿಗೆ ರಾಮಬಾಣವಾಗಿರುವ ಕೂಶ್ಮಾಂಡ ಮಂತ್ರಗಳನ್ನು ಅರ್ಥಸಹಿತ ಪ್ರಕಾಶಪಡಿಸುತ್ತಿರುವ ನಿಮ್ಮ ಪ್ರಯತ್ನ ಅತ್ಯಂತ ಪ್ರಸ್ತುತ.

ಪ್ರಕಾಶನ ಕಾರ್ಯ ನಿರ್ವಿಘ್ನವಾಗಿ ನಡೆಯಲೆಂದು ಮತ್ತು ಪುಸ್ತಕ ಹೆಚ್ಚು ಜನರಿಗೆ ಉಪಯೋಗವಾಗಲೆಂದೂ ಶ್ರೀದೇವರಲ್ಲಿ ಪ್ರಾರ್ಥಿಸಿ, ಪ್ರಸಾದ ಕಳಿಸಲಾಗಿದೆ.



राष्ट्रप्रशस्तिपुरस्कृतः आस्थानमहाविद्वान् रामचन्द्र शास्त्री सूरिः ।
अध्यापकः, अद्वैत वेदान्त पाठशाला, कवलक्कि ।
पो-कवलक्कि, ता-होन्नावर, जि-उत्तरकन्नड, कर्नाटक राज्य-५८१३३४,
फो-०८३८७-७९५९५

दिनांक- 29/5/2001

ಕೂಶ್ಮಾಂಡ ಹೋಮವು ಕೃಷ್ಣಯಜುರ್ವೇದ ತೈತ್ತಿರೀಯ ಅರಣ್ಯಕದಲ್ಲಿ ಉಕ್ತವಾಗಿದೆ. ಸಹಜವಾಗಿಯೂ, ಜ್ಞಾತಾ-ಜ್ಞಾತವಾಗಿಯೂ, ಸಣ್ಣಪುಟ್ಟ ಪಾಪಗಳಿಗೂ ಸಹ ಪರಿಹಾರ-ಕ್ಕಾಗಿ ವೈದಿಕರು ಇದನ್ನು ಉಪಯೋಗಿಸುತ್ತಿದ್ದಾರೆ. ತಾನು ಅಪವಿತ್ರನೆಂದು ತಿಳಿದಾಗಲೇ ಈ ಕೂಶ್ಮಾಂಡ ಹವನವನ್ನು ಮಾಡಲು ಅದರಲ್ಲಿಯೇ ವಿಧಿ ಇದೆ.

ಇದರ ಅರ್ಥವನ್ನು ತಿಳಿದು ಮಾಡುವುದು ಸಂಪೂರ್ಣಫಲಕ್ಕೆ ಸಾಧಕವಾಗುತ್ತದೆ. ಆದ್ದರಿಂದ ನಮ್ಮ ಚಿರಂಜೀವಿ।। ಸುಬ್ರಾಯನು ಆ ಮಂತ್ರಗಳನ್ನು ಕನ್ನಡೀಕರಿಸಿ ಕನ್ನಡದ ಜನರ ಹಿತಕ್ಕಾಗಿ ತುಂಬಾ ಶ್ರಮಿಸಿದ್ದಾನೆ. ಈವರೆಗೂ ಇದು ಬೇರೆ ಭಾಷೆಯಲ್ಲಿ ಇರಲಿಲ್ಲ. ಇದರಿಂದ ವೈದಿಕರು ಹಾಗೂ ಲೌಕಿಕರು ಈ ಗ್ರಂಥವನ್ನು ಉಪಯೋಗಿಸಿಕೊಂಡು ಪೂರ್ಣಫಲಕ್ಕೆ ಪಾತ್ರರಾಗುವಂತಾಗಲೆಂದೂ ಅದರಿಂದ ಈತನ ಶ್ರಮವು ಸಾರ್ಥಕವಾಗಲೆಂದೂ ಆಶಿಸುತ್ತೇನೆ. ಇಂಥ ಗ್ರಂಥಗಳು ಚಿ।। ಸುಬ್ರಾಯನ ಕೈಯಿಂದ ಇನ್ನೂ ಎಷ್ಟೋ ಹೊರಬರಲೆಂದು ಆಶೀರ್ವದಿಸುತ್ತೇನೆ.

**रामचन्द्रशास्त्री सूरिः**

ಶ್ರೀ:

# ಮರುಮುದ್ರಣಕ್ಕೆ ಮೊದಲ ನುಡಿ

''**ಕೂಶ್ಮಾಂಡ ಮಂತ್ರಾರ್ಥ ದೀಪಿಕಾ**'' ಎಂಬೀ ಕಿರುಗ್ರಂಥವನ್ನು ಸಹೃದಯಿಗಳಾದ ವೈದಿಕ ವಿದ್ವದ್ಬಂಧುಗಳು ಹಾಗೂ ಆಸ್ತಿಕ ಮಹನೀಯರು ಪ್ರೀತ್ಯಾದರಗಳಿಂದ ಸ್ವೀಕರಿಸಿ ಈ ಪ್ರಕಾಶನದ ಯಶಸ್ಸಿಗೆ ಕಾರಣರಾಗಿದ್ದಾರೆ. ಆ ಎಲ್ಲಾ ಮಹನೀಯರುಗಳಿಗೂ ನನ್ನ ಅನಂತ ನಮನಗಳು.

ಅನುಷ್ಠಾನದ ಸೌಕರ್ಯದ ದೃಷ್ಟಿಯಿಂದ ಅಲ್ಪಸ್ವಲ್ಪ ಬದಲಾವಣೆಯನ್ನೂ ಹಲವು ವೈದಿಕ ವಿದ್ವಾಂಸರು ಸೂಚಿಸಿ ಉಪಕರಿಸಿದ್ದಕ್ಕಾಗಿ ಅವರಿಗೂ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇನೆ. ಜೊತೆಗೆ ''ಅರ್ಥವನ್ನರಿತು ಅನುಷ್ಠಾನ ಮಾಡುವಲ್ಲಿ ಈ ಕಿರು ಹೊತ್ತಿಗೆ ತುಂಬಾ ಉಪಯುಕ್ತವಾಗಿದೆ ಹಾಗೂ ಈ ಪ್ರಕಾಶನದ ನಂತರ ಅನೇಕ ಕಡೆ ಇದರ ಅನುಷ್ಠಾನವನ್ನು ವಿಶೇಷವಾಗಿ ನಡೆಸಿದ್ದೇವೆ'' ಎಂಬ ಹಲವು ವೈದಿಕರ ಅಭಿಪ್ರಾಯವನ್ನು ತಿಳಿದು ನಿಜವಾಗಿಯೂ ಇದು ಸಮಾಜೋಪಯೋಗಿಯಾಗಿದ್ದೆಂದು ಮನಗಂಡು ಈಗ ಎರಡನೇ ಮುದ್ರಣಕ್ಕೆ ಮುಂದಾಗಿದ್ದೇನೆ.

ಮೊದಲಿನ ಮುದ್ರಣದ ಕೆಲವು ಲೋಪದೋಷಗಳನ್ನೂ ಮತ್ತು ಮುದ್ರಣದೋಷಗಳನ್ನೂ ಇಲ್ಲಿ ಗಮನದಲ್ಲಿಟ್ಟು ಸರಿಪಡಿಸಲಾಗಿದೆ.

ಇಲ್ಲಿ ಪುನಃ ಲೋಪದೋಷಗಳೇನಾದರೂ ಇದ್ದಲ್ಲಿ ಆತ್ಮೀಯತೆಯಿಂದ ತಿಳಿಸಿ ಉಪಕರಿಸಬೇಕೆಂದು ಎಲ್ಲ ಹಿರಿಯರಲ್ಲೂ ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇನೆ.

ಇದಕ್ಕೆ ಆಶೀರ್ವಚನ ನೀಡಿದ ಎಲ್ಲ ಗುರುವರೇಣ್ಯರನ್ನು ಮತ್ತು ಹಿರಿಯರನ್ನು ಪುನಃ ವಂದಿಸುತ್ತ ತಮ್ಮೆಲ್ಲರ ಶುಭಹಾರೈಕೆ ಸದಾ ನನ್ನ ಮೇಲಿರಲೆಂದು ವಿನಮ್ರನಾಗಿ ಪ್ರಾರ್ಥಿಸುತ್ತೇನೆ.

ಸಜ್ಜನ ವಿಧೇಯ
**ಡಾ|| ಸುಬ್ರಾಯ. ವಿ. ಭಟ್ಟ** (ಗುಂಜಗೋಡು)
ಮೀಮಾಂಸಾ ವಿಭಾಗಾಧ್ಯಕ್ಷ
ರಾಜೀವಗಾಂಧಿ ಕೇಂದ್ರಿಯ
ಸಂಸ್ಕೃತ ವಿದ್ಯಾಪೀಠಂ, ಶೃಂಗೇರಿ

ತಾರಣ ಸಂವತ್ಸರೀಯ
ಆಷಾಢ ಶುಕ್ಲ ಏಕಾದಶೀ
28-6-2004

# ಮೊದಲ ಮಾತು

ನಿತ್ಯಸತ್ಯವಾದ ವೇದಗಳು ಮನುಕುಲದ ಉದ್ಧಾರಕ್ಕೆ ಸನ್ನಿಹಿತವಾದ ಅಲೌಕಿಕ ಮಾರ್ಗದರ್ಶಿಗಳು. ಇಲ್ಲಿ ಐಹಿಕ ಹಾಗೂ ಪಾರಲೌಕಿಕವಾದ ಸುಖಕ್ಕೆ ಸಾಧನರೂಪ-ವಾದ ಅನೇಕ ಯಜ್ಞ-ಯಾಗಾದಿ ಕರ್ಮಗಳು ವಿಹಿತವಾಗಿವೆ. ಅವು ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ಪ್ರಾಯಶ್ಚಿತ್ತ ಹೀಗೆ ಅನೇಕ ವಿಧವಾಗಿವೆ. ಅವುಗಳಲ್ಲಿ ಪ್ರಾಯಶ್ಚಿತ್ತ ಕರ್ಮಗಳು ಗುರುತರವಾದ ಪಾಪವಿಶೇಷಗಳನ್ನೂ ಹಾಗೂ ಜನ್ಮ-ಜನ್ಮಾಂತರಗಳಲ್ಲಿ ಸಂಚಿತವಾದ ಪಾಪಶೇಷಗಳನ್ನೂ ಪರಿಹರಿಸುವವುಗಳಾಗಿವೆ.

ಸ್ಮೃತಿಕಾರರು ಹಾಗೂ ಸೂತ್ರಕಾರರು ಪಾಪಪರಿಹಾರಕ್ಕಾಗಿ ಅನೇಕ ವಿಧವಾದ (ಚಾಂದ್ರಾಯಣಾದಿ ಕೃಚ್ಛ್ರವೇ ಮೊದಲಾದ) ಪ್ರಾಯಶ್ಚಿತ್ತಗಳನ್ನು ತಿಳಿಸಿದ್ದರೂ ಪ್ರಾಯಶ್ಚಿತ್ತ ಕರ್ಮಗಳಲ್ಲಿ ಮೂರ್ಧನ್ಯವಾದದ್ದು ''ಕೂಶ್ಮಾಂಡ ಹೋಮ.'' ಪಾಪಪರಿಹಾರಕ್ಕಾಗಿ ಸಾಕ್ಷಾತ್ ಶ್ರುತಿಯಿಂದ ವಿಹಿತವಾಗಿರುವುದೇ ಇದರ ವೈಶಿಷ್ಟ್ಯ. ಮಹಾಪಾತಕ ಸದೃಶವಾದ ಪಾಪಗಳೂ ಈ ಕೂಶ್ಮಾಂಡ ಹೋಮದಿಂದ ಪರಿಹಾರವಾಗುವವೆಂದು ವೇದವೇ ತಿಳಿಸುತ್ತದೆ.

ಈ ಕೂಶ್ಮಾಂಡ ಮಂತ್ರಗಳು ತೈತ್ತಿರೀಯ ಆರಣ್ಯಕದಲ್ಲಿ ಎರಡನೇ ಪ್ರಪಾಠಕದಲ್ಲಿ ಪಠಿತವಾಗಿವೆ.

ಬೋಧಾಯನಾಚಾರ್ಯರು ತಮ್ಮ ಧರ್ಮಸೂತ್ರದಲ್ಲಿ ಈ ಹೋಮಕ್ಕೆ ಸಂಬಂಧಿಸಿದ ವಿಧಿ-ವಿಧಾನಗಳನ್ನು ಮೂರನೇ ಪ್ರಶ್ನೆಯ ಏಳನೇ ಅಧ್ಯಾಯ(ಖಂಡ)ದಲ್ಲಿ ಸ್ಪಷ್ಟಪಡಿಸಿದ್ದಾರೆ.

ಪ್ರಕೃತ ಗ್ರಂಥಪ್ರಕಾಶನವನ್ನು ಸ್ವರ್ಗಸ್ಥರಾದ ನಮ್ಮ ಪೂಜ್ಯ ತಂದೆ-ತಾಯಿಗಳಿಗೆ ''ಸಮರ್ಪಣೆ''ಯಾಗಿ ಕೈಗೆತ್ತಿಕೊಂಡಿದ್ದೇವೆ.

ನಮ್ಮ ಪೂಜ್ಯ ತಂದೆಯವರು (ದಿ|| ವೆಂಕಟರಮಣ ಭಟ್ಟರು) ಪ್ರಸಿದ್ಧ ವೈದಿಕ ಮನೆತನದಲ್ಲಿ ಹುಟ್ಟಿ ಬೆಳೆದು, ಅಂದಿನ ಬಡತನದ ಕಷ್ಟ-ಕಾರ್ಪಣ್ಯಗಳ ಮಧ್ಯದಲ್ಲೂ ಯಥೋಚಿತವಾಗಿ ವೇದಾಧ್ಯಯನ, ಬೋಧಾಯನೀಯ ಪ್ರಯೋಗ (ಪೂರ್ವಾಪರ) ಗಳನ್ನು ಅಧ್ಯಯನ ಮಾಡಿ, ಪರಿಪೂರ್ಣವಾದ ವೈದಿಕ ಸಂಪ್ರದಾಯಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದವರು. ಸ್ವತಃ ಅನುಷ್ಠಾನ ಪರರೂ ಆಗಿದ್ದು, ತಮ್ಮನ್ನು ಕುಲಪುರೋಹಿತರೆಂದು ಒಪ್ಪಿಕೊಂಡು ನಡೆಸಿಕೊಂಡು ಬರುತ್ತಿದ್ದ ಶಿಷ್ಯರಿಗೆಲ್ಲ ಸೂಕ್ತ ಮಾರ್ಗದರ್ಶಕರೂ, ಸಹಾಯ-ಸಹಕಾರಿಗಳೂ ಆಗಿದ್ದು, ಸ್ಥಾನದ ಘನತೆಯನ್ನು ಎತ್ತಿಹಿಡಿದವರಾಗಿ, ಈ ವೈದಿಕ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗ-ಬೇಕೆಂಬ ಸದುದ್ದೇಶದಿಂದ ಮಕ್ಕಳಾದ ನಮಗೂ ವೇದ-ಶಾಸ್ತ್ರಾಧ್ಯಯನಗಳನ್ನು ಮಾಡಿಸಿ ತಮ್ಮ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಿ, ಸುದೀರ್ಘವಾದ ಆದರ್ಶಮಯವಾದ ಬಾಳನ್ನು ಬಾಳಿ ಬೆಳಗಿದ್ದಾರೆ.

ಆದಕ್ಕೆ ಸಮರ್ಪಕವಾಗಿ ನಮ್ಮ ಪೂಜ್ಯ ತಾಯಿ(ದಿ|| ಮಹಾದೇವಿ)ಯವರೂ ಅತ್ಯಂತ ಬಾಲ್ಯದಲ್ಲೇ ತಂದೆ-ತಾಯಿಗಳನ್ನು ಕಳೆದುಕೊಂಡವರಾಗಿದ್ದು, ಬಂಧುವರ್ಗದ ಆಸರೆಯಲ್ಲಿ ಬೆಳೆದು ಸದ್ಗೃಹಿಣಿಯಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಿ ಸುತ್ತಮುತ್ತಲಿನ ಪರಿಸರದಲ್ಲಿ ಹಾಗೂ ಬಂಧುಬಳಗದವರಲ್ಲಿ ''ಅಜಾತಶತ್ರು'' ಎಂಬ ಅರ್ಥದ ಸಾಕಾರ ಮೂರ್ತಿಯಾಗಿ ಜೀವನವನ್ನು ಸಾರ್ಥಕಗೊಳಿಸಿದ್ದಾರೆ.

ಕಳೆದ ವಿಕ್ರಮ ಸಂ||ದ ಶ್ರಾವಣ ಶುಕ್ಲ ಪಂಚಮಿ ಶುಕ್ರವಾರ (ದಿನಾಂಕ-4.8.2000)ದಂದು ಇಬ್ಬರೂ ಒಂದೇ ದಿನದಲ್ಲಿ ನಮ್ಮನ್ನಗಲಿದ ಪೂಜ್ಯ ತಂದೆ-ತಾಯಿಗಳ ಸ್ಮರಣಾರ್ಥ ವೈದಿಕ ಕ್ಷೇತ್ರಕ್ಕೆ ಉಪಯೋಗವಾಗುವ ಒಂದು ಗ್ರಂಥ ಪ್ರಕಾಶನ ರೂಪವಾದ ಸೇವೆಯನ್ನು ಸಲ್ಲಿಸಬೇಕೆಂಬ ಸದುದ್ದೇಶದಿಂದ ಈ **''ಕೂಶ್ಮಾಂಡ ಮಂತ್ರಾರ್ಥ ದೀಪಿಕಾ''** ಎಂಬ ಮಂತ್ರಾರ್ಥವನ್ನೊಳಗೊಂಡ, ಸ್ವಾಹಾಕಾರ ಮತ್ತು ಬೋಧಾಯನೀಯ ಕೂಶ್ಮಾಂಡ ಹೋಮ ಪ್ರಯೋಗ ಸಹಿತವಾದ ಈ ಕಿರುಹೊತ್ತಿಗೆ-ಯನ್ನು ಕನ್ನಡ ಭಾಷೆಯಲ್ಲಿ ರಚಿಸಿ, ಪ್ರಕಾಶಿಸುತ್ತಿದ್ದೇವೆ.

ಇಲ್ಲಿ ಮಂತ್ರಗಳ ಅನ್ವಯಾನುಸಾರ (ಸಾಯಣ-ಭಾಷ್ಯಾನುಸಾರವಾಗಿ) ಅರ್ಥ ಮತ್ತು , ತಾತ್ಪರ್ಯಾರ್ಥಗಳನ್ನು ಪ್ರತ್ಯೇಕವಾಗಿ ತೋರ್ಪಡಿಸಿದ್ದು, ಈ ಕೂಶ್ಮಾಂಡ ಹೋಮವನ್ನು ಮಾಡುವ ವೈದಿಕ ಸಮುದಾಯಕ್ಕೂ ಮತ್ತು ಮಾಡಿಸುವ ಆಸ್ತಿಕ ಮಹನೀಯರಿಗೂ ಅರ್ಥ ಮತ್ತು ತಾತ್ಪರ್ಯವನ್ನು ತಿಳಿದು ಅನುಷ್ಠಾನ ಮಾಡುವುದಕ್ಕೆ ಇದು ಸಹಕಾರಿಯಾಗುವುದೆಂದು ನನ್ನ ದೃಢ ವಿಶ್ವಾಸ. ಜೊತೆಗೆ ಮಂತ್ರ ಸ್ವಾಹಾಕಾರವನ್ನೂ (ಉದ್ದೇಶ-ತ್ಯಾಗಸಹಿತವಾಗಿ) ಬೋಧಾಯನೀಯ ಕೂಶ್ಮಾಂಡ ಹೋಮ ಪ್ರಯೋಗವನ್ನೂ ಸೇರಿಸಿರುವುದರಿಂದ ವೈದಿಕ ಸಮುದಾಯಕ್ಕೆ ವಿಶೇಷವಾಗಿ ಬೋಧಾಯನ ಸೂತ್ರಾನುಯಾಯಿಗಳಿಗೆ ಅನುಷ್ಠಾನದ ಸೌಕರ್ಯ ಒದಗುವುದೆಂದು ನಾನು ಊಹಿಸುತ್ತೇನೆ.

ಈ ಕಿರುಗ್ರಂಥಕ್ಕೆ ಶೃಂಗೇರಿ ಶಾರದಾಪೀಠಾಧೀಶ್ವರರಾದ **ಜಗದ್ಗುರು ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳಿಂದ ''ಅನುಗ್ರಹ ಸಂದೇಶ''**ವನ್ನು ಪ್ರಾರ್ಥಿಸಿದಾಗ, ಜಗದ್ಗುರುಗಳವರು ಈ ಗ್ರಂಥದ ಹಸ್ತಪ್ರತಿಯನ್ನು ಆಮೂಲಾಗ್ರ ಪರಿಶೀಲಿಸಿ, ಸಂಬಂಧಪಟ್ಟ ಭಾಷ್ಯಾದಿಗಳನ್ನೂ ಅವಲೋಕಿಸಿ, ಇಲ್ಲಿರುವ ಹಲವು ಲೋಪದೋಷ-ಗಳನ್ನು ತಿದ್ದಿ, ನನ್ನ ಅನೇಕ ಸಂದೇಹಗಳಿಗೆ ಅತ್ಯಂತ ವಾತ್ಸಲ್ಯದಿಂದ ಸೂಕ್ತ ಪರಿಹಾರವೊದಗಿಸಿದ್ದಾರೆ. ಹಾಗೂ ಸ್ವಾಹಾಕಾರದ ವಿಷಯದಲ್ಲಿ ಮತ್ತು ಉಪಸ್ಥಾನಕ್ಕೆ ಸಂಬಂಧಿಸಿದಂತೆ ಬೋಧಾಯನ ಧರ್ಮಸೂತ್ರದ ಅಭಿಪ್ರಾಯಗಳನ್ನು ಸಂಗ್ರಹಿಸಿ-ಕೊಟ್ಟಿದ್ದಾರೆ. ಕೆಲವು ಮಂತ್ರಗಳಲ್ಲಿ ತಾತ್ಪರ್ಯಕ್ಕೆ ಸಂಬಂಧಿಸಿ ವಿಶೇಷ ಔಚಿತ್ಯಗಳನ್ನು ಸೂಚಿಸಿದ್ದಾರೆ. ಜೊತೆಗೆ ಇದರ ಪ್ರಕಾಶನಕ್ಕೆ **'ಅನುಗ್ರಹ ಸಂದೇಶ'**ವನ್ನೂ ದಯಪಾಲಿಸಿದ್ದಾರೆ. ಹೀಗೆ ಈ ಪ್ರಕಾಶನಕ್ಕೆ ಅನುಗ್ರಹಿಸಿದ ''ಜ್ಞಾನ-ತಪೋಮೂರ್ತಿ'' ಗಳಾದ ಶೃಂಗೇರಿ ಜಗದ್ಗುರು **ಶ್ರೀ ಶ್ರೀ ಭಾರತೀತೀರ್ಥ ಸ್ವಾಮಿಗಳವರ**

ದಿವ್ಯಪಾದಾರವಿಂದಗಳಲ್ಲಿ ಶಿ॥ಸಾ॥ ಪ್ರಣಾಮಗಳನ್ನು ಸಮರ್ಪಿಸಿ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಇದೇ ರೀತಿ, ನಮ್ಮ ಪಾರಂಪರಿಕ ಗುರುಪೀಠಾಧಿಪತಿಗಳಾದ ಹವ್ಯಕ ಮಂಡಲಾಧೀಶ **ಶ್ರೀ ಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳೂ** ಸಹ ಅತ್ಯಂತ ವಿಶ್ವಾಸದಿಂದ ಗ್ರಂಥಪ್ರಕಾಶನದ ಆರ್ಥಿಕ ವ್ಯವಸ್ಥೆಯ ಸ್ಥಿತಿ-ಗತಿಗಳ ಬಗ್ಗೆ ವಿಚಾರಿಸಿ, ಸುವರ್ಣಮಂತ್ರಾಕ್ಷತೆಯನ್ನು ನೀಡಿ "**ಅನುಗ್ರಹ ಸಂದೇಶ**"ವನ್ನು ದಯಪಾಲಿಸಿದ್ದಾರೆ. ಹೀಗೆ ಅನುಗ್ರಹಿಸಿದ ಹವ್ಯಕ ಮಂಡಲಾಧೀಶ, **ಶ್ರೀ ಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳ** ದಿವ್ಯಪಾದಾರವಿಂದಗಳಲ್ಲಿ ಶಿ॥ಸಾ॥ ಪ್ರಣಾಮಗಳನ್ನು ಸಲ್ಲಿಸಿ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಅಂತೆಯೇ- ಸೋಂದಾ-ಸ್ವರ್ಣವಲ್ಲೀ ಮಠಾಧಿಪತಿಗಳಾದ **ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರೂ** ಈ ಗ್ರಂಥಪ್ರಕಾಶನಕ್ಕೆ "**ಅನುಗ್ರಹ ಸಂದೇಶ**"ವನ್ನು ದಯಪಾಲಿಸಿ ಅನುಗ್ರಹಿಸಿರುತ್ತಾರೆ. **ಶ್ರೀ ಶ್ರೀಗಳವರ** ದಿವ್ಯ ಪಾದಾರವಿಂದಗಳಲ್ಲಿ ಶಿ॥ಸಾ॥ ಪ್ರಣಾಮಗಳನ್ನು ಸಲ್ಲಿಸುವುದರ ಮೂಲಕ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ನನಗೆ ಬಾಲ್ಯಪಾಠ ಹೇಳಿದ ವಿದ್ಯಾಗುರುಗಳಾದ **ಶ್ರೀ ಸೂರೀ ರಾಮಚಂದ್ರ ಶಾಸ್ತ್ರಿಗಳೂ** ಈ ಗ್ರಂಥಕ್ಕೆ ಆಶೀರ್ವದಿಸಿದ್ದಾರೆ. ಅವರಿಗೂ ನನ್ನ ಸಾಷ್ಟಾಂಗ ಪ್ರಣಾಮಗಳು.

ಈ ಪ್ರಕಾಶನದಲ್ಲಿ ಸಂಪೆಕಟ್ಟೆ ವೇ॥ಬ್ರ॥ ಶ್ರೀ॥ ಶಂಕರ ನಾರಾಯಣ ಘನಪಾಠಿಗಳು ಮತ್ತು ಶೃಂಗೇರಿಯ ಶ್ರೀಮಠದ ಸದ್ವಿದ್ಯಾ ಸಂಜೀವಿನೀ ಸಂಸ್ಕೃತ ಮಹಾಪಾಠಶಾಲೆಯ ಕೃಷ್ಣ ಯಜುರ್ವೇದ ವಿಭಾಗದ ಪ್ರಾಧ್ಯಾಪಕರಾದ ವೇ॥ಬ್ರ॥ಶ್ರೀ॥ ಕೇಶವಭಟ್ಟ ಡೋಂಗ್ರೆ, ಇವರು ಮಂತ್ರವಿಭಾಗ ಮತ್ತು ಸ್ವಾಹಾಕಾರಗಳಿಗೆ ಸಂಬಂಧಿಸಿದಂತೆ ಉತ್ತಮ ಸಲಹೆಗಳನ್ನಿತ್ತು ಸಹಕರಿಸಿದ್ದಾರೆ. ಅವರಿಗೆ ನನ್ನ ಅನಂತ ಪ್ರಣಾಮಗಳು.

ಈ ಗ್ರಂಥಪ್ರಕಾಶನದಲ್ಲಿ ನನ್ನ ಹಿರಿಯ ಅಣ್ಣ ವೇ॥ಮೂ॥ ಗಣಪತಿ ಭಟ್ಟರು ಅನೇಕ ಸಲಹೆಗಳನ್ನಿತ್ತಿದ್ದಾರೆ ಮತ್ತು ಹೋಮಪ್ರಯೋಗಕ್ಕೆ ಸಂಬಂಧಿಸಿ ಮಾರ್ಗದರ್ಶನ ಮಾಡಿದ್ದಾರೆ. ಹಾಗೂ ನನ್ನ ಅಣ್ಣಂದಿರಾದ ಶ್ರೀ ಆರ್.ವಿ. ಭಟ್ಟ ಹಾಗೂ ಶ್ರೀ ಚಂದ್ರಶೇಖರ ಭಟ್ಟ, ಅವರು ಈ ಪ್ರಕಾಶನ ಕಾರ್ಯದಲ್ಲಿ ತುಂಬುಹೃದಯದ ಸಹಾಯ ಸಹಕಾರಗಳನ್ನು ನೀಡಿ ಸಹಕರಿಸಿದ್ದಾರೆ. ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಈ ಗ್ರಂಥದ ಹಸ್ತಪ್ರತಿಯನ್ನು ಸಿದ್ಧಪಡಿಸುವಲ್ಲಿ ಸಹಕಾರವಿತ್ತ ನನ್ನ ವಿದ್ಯಾರ್ಥಿಗಳಾದ ಚಿ॥ ಉಮೇಶ ಮತ್ತು ಚಿ॥ ವೆಂಕಟಾಚಲರಿಗೆ ಶುಭಾಶಂಸನೆಗಳು.

ಹಾಗೆಯೇ ಈ ಕಾರ್ಯದಲ್ಲಿ ಸೂಕ್ತ ಮುದ್ರಣಾಲಯವನ್ನು ಪರಿಚಯಿಸಿ, ಮುದ್ರಣ ಸಂಬಂಧಿ ಅನೇಕ ಸಲಹೆ-ಸೂಚನೆಗಳನ್ನು ನೀಡಿದ ಬೆಂಗಳೂರಿನ ನ್ಯಾಶನಲ್ ಕಾಲೇಜಿನ

ಸಂಸ್ಕೃತ ವಿಭಾಗದಲ್ಲಿ ಪ್ರಾಧ್ಯಾಪಕರಾದ ಮಿತ್ರ, ಡಾ|| ಎಂ.ಕೆ. ಶ್ರೀಧರ್‌ರವರಿಗೂ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಗ್ರಂಥವನ್ನು ಅತ್ಯಲ್ಪಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಎನ್.ಆರ್. ಕಾಲೋನಿಯಲ್ಲಿರುವ 'ವಾಗರ್ಥ' ಮುದ್ರಣದವರಿಗೂ ಅನಂತ ವಂದನೆಗಳು.

ಈ ಕಿರುಗ್ರಂಥವನ್ನು ಪ್ರೀತ್ಯಾದರಗಳಿಂದ ಸಹೃದಯಿಗಳಾದ ಆಸ್ತಿಕ ಬಂಧುಗಳು ಸ್ವೀಕರಿಸುವರೆಂಬ ಪೂರ್ಣವಿಶ್ವಾಸ ನನ್ನದು. ಇಲ್ಲಿರುವ ಲೋಪ-ದೋಷಗಳನ್ನು. ಆತ್ಮೀಯ ವಿದ್ವಾಂಸರು ತಿಳಿಸಿ ಉಪಕರಿಸುವರೆಂದು ನಂಬಿದ್ದೇನೆ. ಅರ್ಥವನ್ನರಿತು ಅನುಷ್ಠಾನ ಮಾಡುವಲ್ಲಿ ಈ ಕಿರುಹೊತ್ತಿಗೆ ಸಹಕಾರಿಯಾದರೆ ನನ್ನ ಪ್ರಯತ್ನ ಸಫಲವೇ ಸರಿ. ತಮ್ಮೆಲ್ಲರ ಶುಭಹಾರೈಕೆ ಸದಾ ನನ್ನ ಮೇಲಿರಲೆಂದು ವಿನಮ್ರವಾಗಿ ಪ್ರಾರ್ಥಿಸುತ್ತೇನೆ.

ವೃಷ-ಸಂವತ್ಸರೀಯ
ಜ್ಯೇಷ್ಠ ಕೃಷ್ಣ ಏಕಾದಶೀ.
17-6-2001.

ಸಜ್ಜನ ವಿಧೇಯ
**ಸುಬ್ರಾಯ ವಿ. ಭಟ್ಟ, ಗುಂಜಗೋಡು**
**ಶೃಂಗೇರಿ.**

॥ श्रीगणेशशारदागुरुभ्यो नमः ॥

# ಕೂಶ್ಮಾಂಡ ಹೋಮದ ಮಹತ್ವ

ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳ ಸಾಧನೆಯೇ ಮನುಷ್ಯ ಜೀವನದ ಗುರಿ. ಇವುಗಳಲ್ಲಿ ಮೊದಲನೆಯದಾದ ಧರ್ಮದ ಅನುಷ್ಠಾನವು ಐಹಿಕ ಆಮುಷ್ಮಿಕ ಶ್ರೇಯಸ್ಸಾಧನವೆಂಬುದು ಭಾರತೀಯ ಸನಾತನ ವೈದಿಕ ಸಂಸ್ಕೃತಿಯಲ್ಲಿ ನಮ್ಮ ಪೂರ್ವಿಕರಾದ, ತಪಸ್ವಿಗಳೂ, ದಿವ್ಯಜ್ಞಾನಿಗಳೂ ಆದ ಋಷಿಗಳು ಲೋಕಕ್ಕೆ ಕೊಡುಗೆಯಾಗಿ ಕೊಟ್ಟ ದಾರಿದೀಪ.

ಇಂತಹ 'ಧರ್ಮ' ಯಾವುದು? ಅದರ ಸ್ವರೂಪವೇನು? ಎಂಬ ವಿಮರ್ಶೆ-ಯುಂಟಾದಾಗ ''ವೇದದಲ್ಲಿ ತಿಳಿಸಲ್ಪಟ್ಟ ಶ್ರೇಯಸ್ಸಾಧನವಾದ ಯಜ್ಞಯಾಗಾದಿಗಳೇ ಧರ್ಮ''ವೆಂದು ಎಲ್ಲಾ ಧರ್ಮಶಾಸ್ತ್ರಕಾರರೂ ಒಕ್ಕೊರಳಿನಿಂದ ತಿಳಿಸಿದ ವಿಷಯ.

ಧರ್ಮಾನುಷ್ಠಾನದಿಂದ ಮನುಷ್ಯನಿಗೆ ಪುಣ್ಯಸಂಪಾದನೆ ಮಾಡುವುದು ಎಷ್ಟು ಮುಖ್ಯವೋ, ಪಾಪಪರಿಹಾರವೂ ಅಷ್ಟೇ ಆವಶ್ಯಕ. ನಿತ್ಯ-ನೈಮಿತ್ತಿಕ ಕರ್ಮಗಳಿಂದ ಪ್ರತ್ಯವಾಯ ಪರಿಹಾರವೂ, ಪ್ರಾಯಶ್ಚಿತ್ತಗಳಿಂದ ಗುರುತರವಾದ ಪಾಪಗಳ ಪರಿಹಾರವೂ ಆಗುತ್ತವೆ. ಇದನ್ನೇ ಸ್ಮೃತಿಕಾರರು ''ಪ್ರಾಯಶ್ಚಿತ್ತೇನ ನಶ್ಯಂತಿ ಪಾಪಾನಿ ಸುಮಹಾಂತ್ಯಪಿ'' ಎಂಬುದಾಗಿ ತಿಳಿಸಿದ್ದಾರೆ. ಹಾಗೆಯೇ ''ಪಾಪೀ ಪ್ರಾಯಶ್ಚಿತ್ತಂ ಕುರ್ಯಾತ್'' ಎಂಬುದಾಗಿ ಪಾಪ ಮಾಡಿದವನು ಅದರ ಪರಿಹಾರಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ವಿಧಿಸಿದ್ದಾರೆ.

ಪ್ರಾಯಶ್ಚಿತ್ತಗಳು : ಮಾಡಲೇಬೇಕಾದ (ವಿಹಿತವಾದ) ಕರ್ತವ್ಯ ಕರ್ಮದ ಅನನುಷ್ಠಾನದಿಂದ ಉಂಟಾದ ದೋಷಗಳನ್ನು ಪರಿಹರಿಸುವುದರೊಂದಿಗೆ ಅಶಾಸ್ತ್ರೀಯವಾಗಿ ಮಾಡಿದ ಕರ್ಮದಿಂದುಂಟಾದ ದೋಷಗಳನ್ನೂ ಪರಿಹರಿಸುವವುಗಳಾಗಿವೆ. ಹಾಗೂ ತಿಳಿದೋ-ತಿಳಿಯದೆಯೋ ಮಾಡಿದ ನಿಷಿದ್ಧ ಕರ್ಮಗಳಿಂದುಂಟಾದ ಪಾಪವನ್ನು ಪರಿಹರಿಸುವವೂ ಆಗಿವೆ. ಅವು ಜಪ, ಹೋಮ, ಕ್ಷೇತ್ರಯಾತ್ರೆ, ತೀರ್ಥಸ್ನಾನಾದಿ ರೂಪವಾಗಿ ಹಲವು ವಿಧವಾಗಿವೆ. ಅವು ದೋಷಗಳಿಗನುಗುಣವಾಗಿ ಶ್ರುತಿ-ಸ್ಮೃತಿ ಮೊದಲಾದವುಗಳಿಂದ ಪ್ರತಿಪಾದಿತ-ವಾದ ಪಾಪ-ಪರಿಹಾರ ಮಾರ್ಗಗಳು.

ಅಂತಹ ಪ್ರಾಯಶ್ಚಿತ್ತಗಳಲ್ಲಿ ಕೂಶ್ಮಾಂಡ ಹೋಮವು ಪ್ರಧಾನವಾದದ್ದು.

ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದ ಕಲ್ಪಸೂತ್ರಕಾರರಾದ ಬೋಧಾಯನಾಪ-ಸ್ತಂಬಾದಿ ಮಹರ್ಷಿಗಳು ಕೇವಲ ಪಾಪಪರಿಹಾರಕ್ಕೋಸ್ಕರ ಕೂಶ್ಮಾಂಡ

ಹೋಮವನ್ನು ವಿಧಾನಮಾಡಿದ್ದಾರೆ. ಹಾಗಾಗಿ ಈ ಕೂಶ್ಮಾಂಡ ಹೋಮವು ಪಾಪ-ಪರಿಹಾರಕ್ಕಾಗಿ ಸರ್ವಸಾಧಾರಣವಾಗಿ ಪ್ರಚಲಿತವಾಗಿರುವ ವೈದಿಕ ಕರ್ಮವಾಗಿದೆ.

ಕೂಶ್ಮಾಂಡ ಹೋಮವೆಂದೇ ಪ್ರಸಿದ್ಧಿ ಹೊಂದುವುದಕ್ಕೆ ಒಂದು ಆಖ್ಯಾಯಿಕೆ ಇದೆ. ತೈತ್ತಿರೀಯ ಆರಣ್ಯಕದಲ್ಲಿ ಎರಡನೇ ಪ್ರಪಾಠಕದಲ್ಲಿ ಮೂರು, ನಾಲ್ಕು, ಐದು ಹಾಗೂ ಆರನೇ ಅನುವಾಕಗಳಲ್ಲಿ ಈ ಕೂಶ್ಮಾಂಡ ಹೋಮಾಂಗವಾದ ಮಂತ್ರಗಳು ವಿಹಿತವಾಗಿವೆ. ತೈತ್ತಿರೀಯ ಆರಣ್ಯಕದ ಎರಡನೇ ಪ್ರಪಾಠಕವು 'ಸ್ವಾಧ್ಯಾಯ ಬ್ರಾಹ್ಮಣ' ಎಂದೇ ನಾಮಾಂತರವನ್ನು ಹೊಂದಿದೆ. ಇಲ್ಲಿ ಸ್ವಾಧ್ಯಾಯವೇ ಪ್ರಧಾನವಾಗಿ ವಿಹಿತವಾಗಿದ್ದು, ಅದಕ್ಕೆ ಪರಿಶುದ್ಧನಾದ ಪುರುಷನೇ ಅಧಿಕಾರಿಯಾಗಿರುವುದರಿಂದ ಶುದ್ಧಿಕಾರಣವಾದ ಯಜ್ಞೋಪವೀತ, ಸಂಧ್ಯಾ-ವಂದನೆ, ಹಾಗೂ ಕೂಶ್ಮಾಂಡ ಹೋಮಗಳು ಕ್ರಮವಾಗಿ ವಿಹಿತವಾಗಿವೆ.

'ಅರುಣ' 'ಕೇತು' ಮತ್ತು 'ವಾತರಶನಾ' ಎಂಬುದಾಗಿ ಮೂರು ಗುಂಪಿನ (ಪರಂಪರೆಯ) ಋಷಿಗಳು ಪ್ರಖ್ಯಾತರಾಗಿದ್ದು, ಆದರಲ್ಲಿ 'ವಾತರಶನಾ' ಎಂಬುದಾಗಿ ಪ್ರಸಿದ್ಧಿ ಹೊಂದಿದ ಸಮೂಹದ ಋಷಿಗಳು, ತಪಸ್ವಿಗಳು ಹಾಗೂ ಊರ್ಧ್ವರೇತಸ್ಕರೂ ಆಗಿದ್ದರು. ಅವರ ತಪಸ್ಸಿನ ಸಾಮರ್ಥ್ಯವನ್ನು ತಿಳಿದು ಅವರನ್ನು ಪ್ರಾರ್ಥಿಸಲು ಒಮ್ಮೆ ಬೇರೆ ಕೆಲವು ಋಷಿಗಳು ಅವರಲ್ಲಿಗೆ ಹೊರಟರು. ಈ ವಿಷಯವನ್ನು ತಮ್ಮ ದಿವ್ಯದೃಷ್ಟಿಯಿಂದ ಮೊದಲೇ ತಿಳಿದ 'ವಾತರಶನಾ' ಋಷಿಗಳು ಅಂತಹ ಮಹತ್ಕಾರ್ಯವನ್ನು ಇವರೇನು ಮಾಡಿಯಾರು? ಎಂಬುದಾಗಿ ತಿಳಿಯಲು ಒಂದೆಡೆ ಅಡಗಿ ಕುಳಿತುಕೊಳ್ಳಲು ನಿಶ್ಚಯಿಸಿದರು. ಎಲ್ಲಿ ಅಡಗಿ ಕುಳಿತುಕೊಳ್ಳಬೇಕೆಂದು ವಿಮರ್ಶಿಸಿ ತಮ್ಮ ಯೋಗ ಸಾಮರ್ಥ್ಯದಿಂದ ಸೂಕ್ಷ್ಮ-ವಾದ ಶರೀರವನ್ನು ಹೊಂದಿ ಕೂಶ್ಮಾಂಡ ಎಂಬ ಹೆಸರಿನ ಮಂತ್ರವಾಕ್ಯಗಳನ್ನೇ ಪ್ರವೇಶಿಸಿ, ಅಡಗಿ ಕುಳಿತರು.

ಅವರನ್ನು ನೋಡಲು ಬಂದ ಋಷಿಗಳು ಅವರನ್ನು ಕಾಣದಿರಲಾಗಿ, ಅತ್ಯಂತ ಶ್ರದ್ಧೆಯಿಂದ ಪರಿಶುದ್ಧವಾದ ಮನಸ್ಸುಳ್ಳವರಾಗಿ, ಧ್ಯಾನವನ್ನಾಚರಿಸಿ ಕೂಶ್ಮಾಂಡ ಮಂತ್ರಗಳಲ್ಲಿ ಅವಿತಿರುವ 'ವಾತರಶನಾ' ಋಷಿಗಳನ್ನು ಕಣ್ಣಾರೆ ಕಂಡರು.

ತಮ್ಮನ್ನು ಹುಡುಕಿಕೊಂಡು ತಾವಿರುವಲ್ಲಿಗೆ ಬಂದ ಆ ಮಹರ್ಷಿಗಳ ಅತಿಥಿ ಸತ್ಕಾರರೂಪದಲ್ಲಿ ಉಪಚರಿಸುವುದಕ್ಕೋಸ್ಕರ ಅವರನ್ನು ವಂದಿಸಿ ''ಯಾವ ರೀತಿಯಲ್ಲಿ ನಿಮಗೆ ಸೇವೆ ಸಲ್ಲಿಸಬೇಕು?'' ಎಂದು ವಿನಂತಿಸಿಕೊಂಡರು. ಅದಕ್ಕುತ್ತರವಾಗಿ ಆ ಮಹರ್ಷಿಗಳು ''ನಾವು ಪಾಪನಿರ್ಮುಕ್ತರಾಗುವುದಕ್ಕೆ ಸಾಧನವನ್ನ ತಿಳಿಸಬೇಕು'' ಎಂದು ಪ್ರಾರ್ಥಿಸಿದರು. ಅದಕ್ಕೆ 'ವಾತರಶನಾ'

ಮಹರ್ಷಿಗಳು ತಕ್ಷಣದಲ್ಲಿ ಪಾಪ ವಿಮೋಚನೆಯ ಮೂಲಕ ಪರಿಶುದ್ಧ-ರಾಗುವುದಕ್ಕೆ ಸಾಧನವನ್ನು ಮನಸ್ಸಿನಲ್ಲಿ ವಿಚಾರಿಸಿ ''ಯದ್ದೇವಾದೇವಹೇಳನಂ'' ಇತ್ಯಾದಿ ಸೂಕ್ತಗಳೇ ಯೋಗ್ಯವೆಂದು ನಿರ್ಣಯಿಸಿ ಈ ಮಂತ್ರಗಳನ್ನು ಉಪದೇಶಿಸಿದರು. ಹಾಗೂ ಈ ''ಯದ್ದೇವಾ ದೇವಹೇಳನಂ'' ಇತ್ಯಾದಿ ಮೊದಲಿನ ಮೂರು ಅನುವಾಕ ಮಂತ್ರಗಳಿಂದ ಹೋಮ ಮಾಡಿ ''ವೈಶ್ವಾನರ ಇತ್ಯಾದಿ ಮಂತ್ರಗಳಿಂದ ಉಪಸ್ಥಾನ (ಪ್ರಾರ್ಥನೆ) ಮಾಡಿ, 'ಭ್ರೂಣಹತ್ಯಾ' ಸದೃಶವಾದ ಮಹಾಪಾಪಗಳಿಂದಲೂ ವಿಮುಕ್ತರಾಗಿರಿ'' ಎಂದು ತಿಳಿಸಿದರು.

ಇಲ್ಲಿ ಭ್ರೂಣಶಬ್ದಕ್ಕೆ ಸಾಂಗವೇದಾಧ್ಯಯನ ಮಾಡಿದ ವಿಪ್ರೋತ್ತಮನೆಂದು ಅರ್ಥ. ಆ ಮಹರ್ಷಿಗಳು ಈ ಮಂತ್ರಗಳಿಂದ ಹೋಮ ಮಾಡಿ ಪಾಪ ವಿಮುಕ್ತರಾದರು.

ಕೂಶ್ಮಾಂಡ ಮಂತ್ರಗಳಲ್ಲೇ ಇದ್ದುಕೊಂಡು· ಈ ಮಂತ್ರಗಳನ್ನು ತಿಳಿಸಿಕೊಟ್ಟಿದ್ದರಿಂದ ಈ ಮಂತ್ರಗಳಿಗೂ 'ಕೂಶ್ಮಾಂಡ ಮಂತ್ರಗಳು' ಎಂಬುದಾಗಿ ಪ್ರಸಿದ್ಧಿ ಬಂದಿದೆ.

ವಿಶೇಷವಾದ ವೈದಿಕಕರ್ಮಗಳ ಅನುಷ್ಠಾನಕ್ಕೆ ಯಜಮಾನನಿಗೆ ಸ್ವರೂಪ-ಯೋಗ್ಯತೆ ಬರಬೇಕಾದರೆ ಅವನು ಮೊದಲು ಪವಿತ್ರನಾಗಿರಬೇಕು. ಅಂದರೆ ಎಲ್ಲಾ ರೀತಿಯ ಪಾಪಗಳಿಂದ ಮುಕ್ತನಾಗಿರಬೇಕು. ನಿತ್ಯಕರ್ಮಗಳನ್ನು ಬಿಡದೆ ನಡೆಸುತ್ತಾ ನಿಷಿದ್ಧ ಕರ್ಮಗಳನ್ನು ಮಾಡದವನಾಗಿ ದೈನಂದಿನ ಬದುಕನ್ನು ನಡೆಸುತ್ತಿರಬೇಕು. ಇದನ್ನು ತಪ್ಪಿದಲ್ಲಿ ಅವನಿಗೆ ವಿಶೇಷ ಕರ್ಮ(ವೈದಿಕ ಕಾಮ್ಯಕರ್ಮ)ಗಳಲ್ಲಿ ಅಧಿಕಾರವೇ ಬರಲಾರದು. ಅಂತಹ ಪಾಪಲೇಶ-ಗಳೇನಾದರೂ ಇದ್ದಲ್ಲಿ ಆ ಅಧಿಕಾರ ಸಿದ್ಧಿಗಾಗಿಯೇ ''ಕರ್ಮಾದಿಷ್ವೇತೈ-ರ್ಜುಹುಯಾತ್'' ಎಂಬುದಾಗಿ ವೈದಿಕ ವಿಶೇಷ ಕರ್ಮಾನುಷ್ಠಾನದ ಆರಂಭದಲ್ಲಿ ಪವಿತ್ರನಾಗುವುದಕ್ಕೆ ಈ ಕೂಶ್ಮಾಂಡ ಹೋಮವೇ ವಿಹಿತವಾಗಿದೆ.

ಹಾಗೆಯೇ ಯಾವಾಗ ತನ್ನ ಪಾವಿತ್ರ್ಯದ ಬಗ್ಗೆ ತನಗೇ ಸಂದೇಹ ಉಂಟಾಗುತ್ತದೆಯೋ, ಅಂದರೆ ''ನಾನು ಪಾಪಕರ್ಮವನ್ನು ಆಚರಿಸಿದ್ದೇನೆ, ನಾನು ಪವಿತ್ರನಾಗಿಲ್ಲ, ನಾನು ಪಾಪಭೂಯಿಷ್ಠನಾಗಿದ್ದೇನೆ,'' ಎಂಬ ಭಾವನೆ ಅಥವಾ ಮಾನಸಿಕವಾದ ತುಮುಲ ಉಂಟಾಗುತ್ತದೆಯೋ ಆಗಲೂ ಈ ಕೂಶ್ಮಾಂಡ ಹೋಮವನ್ನು ಅನುಷ್ಠಾನ ಮಾಡಿ ಪವಿತ್ರನಾಗಬೇಕೆಂದು ಸಾಕ್ಷಾತ್ ಶ್ರುತಿಮಾತೆ ''ಕೂಶ್ಮಾಂಡೈರ್ಜುಹುಯಾದ್ಯೋಽಪೂತ ಇವ ಮನ್ಯೇತ'' ಎಂಬುದಾಗಿ ಉಪದೇಶಿಸಿದ್ದಾಳೆ. ಹಾಗೆಯೇ ಮುಂದೂವರೆದು, ಪ್ರತಿಷಿದ್ಧವಾದ

ಸ್ತ್ರೀಸಂಗಾದಿಗಳನ್ನು ಮಾಡುವುದೂ ಸಹ ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪಕ್ಕೆ ಸಮಾನವಾದ ಪಾಪವೇ ಆಗಿರುವುದರಿಂದ ಅಂತಹ ಪಾಪಗಳೂ ಸಹ ಕೂಶ್ಮಾಂಡ ಹೋಮದಿಂದ ಪರಿಹಾರವಾಗುವುದೆಂದು ''ಯಥಾಸ್ತೇನೋ ಯಥಾ ಭ್ರೂಣಹೈವಮೇಷ ಭವತಿ ಯೋಽಯೋನೌ ರೇತಃ ಸಿಂಚತಿ ಯದರ್ವಾಚೀನ ಮೇನೋ ಭ್ರೂಣ ಹತ್ಯಾಯಾಸ್ತಸ್ಮಾನ್ಮುಚ್ಯತೇ'' ಈ ವಾಕ್ಯದಲ್ಲಿ ತಿಳಿಸಿದೆ.

ಪ್ರತಿಗ್ರಹಾದಿ ಜನಿತ ದೋಷವೂ ಸಹ ಕೂಶ್ಮಾಂಡ ಹೋಮದಿಂದ ನಿವೃತ್ತಿಯಾಗುವುದೆಂದು ಕೂಶ್ಮಾಂಡ ಮಂತ್ರಗಳಲ್ಲೇ ವ್ಯಕ್ತವಾಗಿದೆ. ಪ್ರತಿಗ್ರಹ-ದಿಂದ ದೋಷವುಂಟಾಗುವುದೆಂದು ಸ್ಮೃತಿಕಾರರು–

**ಪ್ರತಿಗ್ರಹೇಣ ವಿಪ್ರಾಣಾಂ ಬ್ರಾಹ್ಮಂ ತೇಜಃ ವಿನಶ್ಯತಿ ।**
**ದುಷ್ಟ ಪ್ರತಿಗ್ರಹಹತೋ ನೂನಂ ಭವತಿ ಪಾತಕೀ ॥**

ಎಂಬುದಾಗಿ ಪ್ರತಿಗ್ರಹ (ದಾನ ತೆಗೆದುಕೊಳ್ಳುವುದು) ಮಾಡಿ ವಿಹಿತ ಅನುಷ್ಠಾನ-ದಿಂದ, ಆ ಪಾಪವನ್ನು ಪರಿಹರಿಸಿಕೊಳ್ಳದಿದ್ದರೆ, ಬ್ರಹ್ಮತೇಜಸ್ಸು ವಿನಾಶ ಹೊಂದುವುದಲ್ಲದೇ, ನಿಷಿದ್ಧ ಪ್ರತಿಗ್ರಹಗಳಿಂದ ಆತ ಪಾತಕಿಯೇ ಆಗುತ್ತಾನೆ ಎಂಬುದಾಗಿ ತಿಳಿಸಿದ್ದಾರೆ.

ಅಂತಹ ದೋಷವನ್ನು ನಿವೃತ್ತಿ ಮಾಡಿಕೊಳ್ಳುವುದಕ್ಕೆ ವೈದಿಕ ವರ್ಗಕ್ಕೆ ಇದು ಅತ್ಯಂತ ಮಹತ್ವದ್ದಾಗಿದೆ. ಹಾಗೂ ಇಂದಿನ ಲೋಕ ವ್ಯವಹಾರದ ಸ್ಥಿತಿಯಲ್ಲಿ ಅಭಕ್ಷ್ಯ-ಭಕ್ಷಣ, ಅಸ್ಪೃಶ್ಯ-ಸ್ಪರ್ಶ ಇತ್ಯಾದಿ ದೋಷಗಳಿಂದ ಮುಕ್ತರಾಗುವುದು ಕಷ್ಟಸಾಧ್ಯವೇ ಆಗಿರುವುದರಿಂದ ಈ ಕೂಶ್ಮಾಂಡ ಹೋಮದಿಂದ ಅದಕ್ಕೆ ಪರಿಹಾರ ಸೂಚಿತವಾಗಿದೆ.

ವೈದಿಕ ಕರ್ಮಾನುಷ್ಠಾನದಲ್ಲಿ ಉಂಟಾಗಬಹುದಾದ ದ್ರವ್ಯಲೋಪ, ಕ್ರಿಯಾಲೋಪ ಮತ್ತು ಮಂತ್ರಲೋಪಗಳೇ ಮೊದಲಾದ ದೋಷಗಳಿಂದುಂಟಾದ ಪಾಪ ಪರಿಹಾರಕ್ಕೂ ಇದು ಸಾಧನವಾಗಿದೆ.

ಆಶ್ವಲಾಯನಾಚಾರ್ಯರೂ ಸಹ ಋತುಮತೀ ಕನ್ಯಾ ಪ್ರತಿಗ್ರಹದ ಸಮಯದಲ್ಲಿ ಪ್ರತಿಗ್ರಹಿಸುವ ವರನು ಆ ಋತುಮತೀ ಕನ್ಯಾ ಪ್ರತಿಗ್ರಹದ ದೋಷ ಪರಿಹಾರಕ್ಕೆ ''ತಾಮುದ್ವಹನ್ ವರಶ್ಚಾಪಿ ಕೂಶ್ಮಾಂಡೈರ್ಜುಹುಯಾತ್ತ್ರಿಶಃ'' ಎಂಬುದಾಗಿ ಯಜುರ್ವೇದ ವಿಹಿತವಾದ ಈ ಕೂಶ್ಮಾಂಡ ಹೋಮವನ್ನೇ ವಿಧಾನ ಮಾಡಿದ್ದಾರೆ.



# ಕೂಶ್ಮಾಂಡ ಮಂತ್ರಗಳ ಅರ್ಥ

1. ಓಂ ಯದ್ದೇವಾ ದೇವಹೇಳನಂ ದೇವಾಸಶ್ಚಕೃಮಾವಯಂ । ಆದಿತ್ಯಾಸ್ತಸ್ಮಾನ್ಮಾ ಮುಂಚತರ್ತಸ್ಯರ್ತೇನ ಮಾಮಿತ ॥

**ಅನ್ವಯಾನುಸಾರ ಅರ್ಥ :** **ದೇವಾಸಃ**=ತೇಜೋಮಯರಾದಂತಹ, **ಆದಿತ್ಯಾಃ**=ಅದಿತಿಯ ಮಕ್ಕಳಾದ, **ದೇವಾಃ**=ದೇವತೆಗಳೇ! **ದೇವಹೇಳನಂ**=ದೇವತೆಗಳ ಸಿಟ್ಟಿಗೆ ಕಾರಣವಾದ ಯಾವ ಕಾರ್ಯವನ್ನು, **ವಯಂ ಚಕೃಮ**=ನಾವು ಮಾಡಿದ್ದೇವೋ, **ತಸ್ಮಾತ್**=ಆ ಅಪರಾಧದಿಂದ, **ಮಾ**=ನೀವು, **ಮುಂಚತ**=ನನ್ನನ್ನು ಬಿಡುಗಡೆ ಮಾಡಿ, ಹಾಗೂ **ಋತಸ್ಯ**=ಯಜ್ಞಸಂಬಂಧಿಯಾದ, **ಋತೇನ**=ಸತ್ಯಸ್ವರೂಪದ ಹೋಮದಿಂದ (ಹೋಮವನ್ನು) ಹವಿಸ್ಸನ್ನು, **ಮಾಂ**=ನೀವು, **ಇತ**=ಹೊಂದಿರಿ.

**ತಾತ್ಪರ್ಯಾರ್ಥ :** ದೇವತೆಗಳ ಕೋಪಕ್ಕೆ ಕಾರಣವಾದ ಯಾವುದಾದರೂ ಕಾರ್ಯವು ನನ್ನಿಂತ ತಿಳಿದೋ, ತಿಳಿಯದೆಯೋ, ಮಾಡಲ್ಪಟ್ಟಿದ್ದರೆ ಈ ಸತ್ಯಸ್ವರೂಪವಾದ ಹೋಮದಿಂದ ಅಥವಾ ಸತ್ಯಕ್ಕೂ ಸತ್ಯರೂಪವಾದ ಈ ಹೋಮದಿಂದ, ತೇಜೋರೂಪವನ್ನು ಹೊಂದಿದ ದೇವತೆಗಳಾದ ನೀವು ಸುಪ್ರೀತರಾಗಿ, ಆ ಕಾರ್ಯದಿಂದ ಉಂಟಾದ ಪಾಪವನ್ನು ಪರಿಹರಿಸಿ, ನನ್ನನ್ನು ನಿರ್ದೋಷಿಯನ್ನಾಗಿ ಮಾಡಿ.

2. ದೇವಾ ಜೀವನ ಕಾಮ್ಯಾ ಯದ್ವಾಚಾಽನೃತಮೂದಿಮ । ತಸ್ಮಾನ್ನ ಇಹ ಮುಂಚತ ವಿಶ್ವೇ ದೇವಾಃ ಸಜೋಷಸಃ ॥

**ಅನ್ವಯಾನುಸಾರ ಅರ್ಥ :** **ದೇವಾಃ**=ದೇವತೆಗಳೇ! ನಾವು, **ಜೀವನ ಕಾಮ್ಯಾಃ**=ಜೀವಿಸುವಿಕೆಯ ಬಯಕೆಯಿಂದ, **ಯದನೃತಂ ವಾಚೋದಿಮ**=ರಾಜಸೇವಾದಿ ಕಾರ್ಯದಲ್ಲಿ ಅವರ ಸಂತೋಷಕ್ಕೋಸ್ಕರ ಸುಳ್ಳನ್ನು ಹೇಳಿದ್ದೇವೆ, **ಸಜೋಷಸಃ**=ಪರಸ್ಪರವಾಗಿ ನಮ್ಮಲ್ಲಿ ಸಮಾನ ಪ್ರೀತಿಯುಳ್ಳವರಾದ, **ವಿಶ್ವೇದೇವಾಃ**=ವಿಶ್ವೇದೇವ ದೇವತೆಗಳೇ! ನೀವು, **ಇಹ**=ಈ ಕೂಶ್ಮಾಂಡ ಹೋಮದ ಅನುಷ್ಠಾನದಿಂದ (ಪ್ರೀತರಾಗಿ), **ತಸ್ಮಾತ್**=ಆ ಪಾಪದಿಂದ, **ನಃ**=ನಮ್ಮನ್ನು, **ಮುಂಚತ**=ಪಾರುಮಾಡಿರಿ.

**ತಾತ್ಪರ್ಯಾರ್ಥ :** ನಮ್ಮ ನಿಜ ಜೀವನದಲ್ಲಿ ಜೀವನಕ್ಕೋಸ್ಕರವಾಗಿ ರಾಜಸೇವೆಯೇ ಮೊದಲಾದ ಕಾರ್ಯಗಳಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ

(ತಿಳಿದೋ-ತಿಳಿಯದೆಯೋ) ನಮ್ಮಿಂದ ಸುಳ್ಳು ಹೇಳಲ್ಪಟ್ಟಿದೆ, ಅಥವಾ ನಾವು ವಂಚನೆ ಮಾಡಿದ್ದೇವೆ. ನಮ್ಮಲ್ಲಿ ಪ್ರೀತಿ(ಮಮತೆ)ಯುಳ್ಳ ವಿಶ್ವೇದೇವ[1] ದೇವತೆಗಳೆಂದು ಕರೆಸಿಕೊಳ್ಳುವ ನೀವು ಈಗ ಅನುಷ್ಠಾನ ಮಾಡುತ್ತಿರುವ ಈ ಕೂಶ್ಮಾಂಡ ಹೋಮದಿಂದ ಸಂತುಷ್ಟಗೊಂಡವರಾಗಿ, ಆ ಅಪರಾಧದಿಂದುಂಟಾದ ಪಾಪವನ್ನು ಹೋಗಲಾಡಿಸಿ ನಮ್ಮನ್ನು ಪಾಪನಿರ್ಮುಕ್ತರನ್ನಾಗಿಸಿರಿ.

3. **ಋತೇನ ದ್ಯಾವಾಪೃಥಿವೀ ಋತೇನ ತ್ವಂ ಸರಸ್ವತಿ ।**
**ಕೃತಾನ್ನಃ ಪಾಹ್ಯೇನಸೋ ಯತ್ಕಿಂಚಾನೃತಮೂದಿಮ ॥**

**ಅ.ಅರ್ಥ** : **ದ್ಯಾವಾಪೃಥಿವ್ಯೌ**=ದ್ಯಾವಾ ಪೃಥಿವೀ ದೇವತೆಗಳೇ! **ಋತೇನ**=ಯಜ್ಞಾನುಷ್ಠಾನದಲ್ಲಿ ಉಂಟಾದ ಲೋಪದಿಂದ, ಯಜ್ಞವೈಗುಣ್ಯರೂಪ ದೋಷ ಉಂಟಾಗಿದ್ದು, ಹಾಗೂ, **ಸರಸ್ವತಿ**=ಸರಸ್ವತೀ ದೇವಿಯೇ! **ಋತೇನ**=ಯಜ್ಞ ವೈಗುಣ್ಯದಿಂದ ಉಂಟಾದ ದೋಷವಿದ್ದು, ನೀವುಗಳು, **ಕೃತಾತ್**=ಈ ಯಜ್ಞ ಸಂಬಂಧಿಯಾದ ದೋಷದಿಂದುಂಟಾದ, **ಏನಸಃ**=ಪಾಪದಿಂದ, **ನಃ**=ನಮ್ಮನ್ನು ರಕ್ಷಿಸಿರಿ, ಹಾಗೂ, **ಯತ್ಕಿಂಚಿದನೃತಮೂದಿಮ**=ಯಜ್ಞ ಸಂಬಂಧಿಯಾಗಿ ಯಾವುದಾದರೂ ಸುಳ್ಳನ್ನು ಹೇಳಿದ್ದರೆ, ಅದರಿಂದುಂಟಾದ ಪಾಪದಿಂದಲೂ ರಕ್ಷಿಸಿ.

---

1. **ವಿಶ್ವೇದೇವ ದೇವತೆಗಳು** : ಇದು ಒಂದು ದೇವತೆಗಳ ಗಣ, ಅಥವಾ ವರ್ಗ. ಇವರು ಧರ್ಮಪುರುಷನಿಂದ ದಕ್ಷಪುತ್ರಿಯಾದ 'ವಿಶ್ವೇ' ಎಂಬ ಪತ್ನಿಯಲ್ಲಿ ಜನಿಸಿದವರು. ವಿಶ್ವೇದೇವ ದೇವತೆಗಳು- (1) ವಸು (2) ಸತ್ಯ (3) ಕ್ರತು (4) ದಕ್ಷ (5) ಕಾಲ (6) ಕಾಮ (7) ಧೃತಿ (8) ಕುರು (9) ಪುರೂರವ (10) ಮಾದ್ರವಾ ಎಂಬುದಾಗಿ ಹತ್ತುಮಂದಿ. ಇವರ ವಿಭಾಗ ಹೀಗಿದೆ-

   ಇಷ್ಟಿಶ್ರಾದ್ಧೇ ಕ್ರತುರ್ದಕ್ಷಃ ಸತ್ಯೋ ನಾಂದೀಮುಖೇ ವಸುಃ ।
   ನೈಮಿತ್ತಿಕೇ ಕಾಲಕಾಮೌ, ಕಾಮ್ಯೇ ಕುರು(ಕ)ಧೃತೀಮತೇ ।
   ಪುರೂರವಾಮಾದ್ರವಾಶ್ಚ ಪಾರ್ವಣೇ ಸಮುದಾಹೃತೌ ॥ ಸ್ಮೃತಿಃ ॥

   (ಕ) ಕಾಮ್ಯೇಚ ಧುರಿಲೋಚನೌ (ಪಾಠಾಂತರ)

   ಯಜ್ಞಯಾಗಾದಿಯಲ್ಲಿ ಮಾಡುವ ದೇವನಾಂದಿಯಲ್ಲಿ ಕ್ರತುಃ, ದಕ್ಷಃ (ವಿಶ್ವೇದೇವರು) ವಿವಾಹಾದಿಗಳಲ್ಲಿ ಮಾಡುವ ನಾಂದೀ ಶ್ರಾದ್ಧದಲ್ಲಿ ಸತ್ಯ ಮತ್ತು ವಸು. (ವಿಶ್ವೇದೇವತೆಗಳು) ನೈಮಿತ್ತಿಕ ಸಪಿಂಡೀಕರಣಾದಿಗಳಲ್ಲಿ- ಕಾಮ, ಕಾಲ (ವಿಶ್ವೇದೇವತೆಗಳು) ಮಹಾಲಯಾದಿಗಳಲ್ಲಿ- ಕುರು, ಧೃತಿ ಅಥವಾ ಧುರಿ ಲೋಚನರು, (ವಿಶ್ವೇದೇವತೆಗಳು) ಪಾರ್ವಣ ಶ್ರಾದ್ಧದಲ್ಲಿ- ಪುರೂರವಾ ಮತ್ತು ಮಾದ್ರವಾ ಎಂಬ ಹೆಸರಿನ ವಿಶ್ವೇದೇವ ದೇವತೆಗಳು, ಹೀಗೆ ಈ ವಿಶ್ವೇದೇವತೆಗಳು ಹವ್ಯ-ಕವ್ಯಗಳಲ್ಲಿ ಪೂಜನೀಯರು.

**ತಾ.ಅರ್ಥ** : ದ್ಯಾವಾಪೃಥಿವೀ ಹಾಗೂ ಸರಸ್ವತಿ ದೇವತೆಗಳೇ! ಯಜ್ಞಾನುಷ್ಠಾನ ಮಾಡುವಾಗ ದ್ರವ್ಯ, ಕ್ರಿಯೆ, ಮಂತ್ರ ಹೀಗೆ ಯಾವುದಾದರೂ ರೀತಿಯ ಲೋಪ-ದಿಂದ ಯಜ್ಞವು ವಿಗುಣವಾಗಿದ್ದು, ಆ ವೈಗುಣ್ಯದೋಷದಿಂದ ಬಂದ ಪಾಪದಿಂದ ನಮ್ಮನ್ನು ರಕ್ಷಿಸಿರಿ. ಹಾಗೂ ಯಜ್ಞಕ್ಕೆ ಸಂಬಂಧಿಸಿದಂತೆ ಯಾವುದಾದರೂ ಸುಳ್ಳು ಹೇಳಿದ್ದಲ್ಲಿ ಆದರಿಂದ ಉಂಟಾದ ಪಾಪವನ್ನೂ ನಾಶ ಮಾಡಿ ನಮ್ಮನ್ನು ಸಂರಕ್ಷಿಸಿರಿ.

**4. ಇಂದ್ರಾಗ್ನೀ ಮಿತ್ರಾವರುಣಾೌ ಸೋಮೋ ಧಾತಾ ಬೃಹಸ್ಪತಿಃ ।**
**ತೇ ನೋ ಮುಂಚಂತ್ವೇನಸೋ ಯದನ್ಯಕೃತಮಾರಿಮ ॥**

**ಅ.ಅರ್ಥ** : **ಯದನ್ಯಕೃತಂ**=ಯಜ್ಞಕ್ಕಿಂತ ಬೇರೆಯಾದ ಕಾರ್ಯವನ್ನು ಉದ್ದೇಶಿಸಿ ಮಾಡಿದ ಅಪರಾಧದಿಂದ ಅಥವಾ ಬೇರೆಯವರಿಂದ ಮಾಡಲ್ಪಟ್ಟ ಯಾವ ಪಾಪವನ್ನು, **ಅರಿಮ**=ನಾವು ಹೊಂದಿದ್ದೇವೋ, **ತಸ್ಮಾದೇನಸಃ**=ಆ ಪಾಪದಿಂದ, **ಇಂದ್ರಾಗ್ನೀ, ಮಿತ್ರಾವರುಣೌ, ಸೋಮಃ, ಧಾತಾ, ಬೃಹಸ್ಪತಿಃ**=ಈ ದೇವತೆಗಳು, **ನಃ**=ನಮ್ಮನ್ನು, ಬಿಡುಗಡೆ ಮಾಡಲಿ.

**ತಾ.ಅರ್ಥ** : ಯಜ್ಞಸಂಬಂಧಿಯಾದ ದೋಷದಿಂದುಂಟಾದ ಪಾಪದಿಂದ ವಿಮುಕ್ತಿಯಾಗಲೆಂದು ಹಿಂದಿನ ಮಂತ್ರದಲ್ಲಿ ಪ್ರಾರ್ಥಿಸಿದ್ದಾಯಿತು. ಈ ಮಂತ್ರ-ದಲ್ಲಿ ಯಜ್ಞಕ್ಕಿಂತ ವಿಭಿನ್ನವಾದ ಕಾರ್ಯದಲ್ಲಿ ಎಸಗಿದ ಅಪರಾಧದಿಂದ ಒದಗಿದ ಪಾಪಕ್ಕೆ ನಾವು ಗುರಿಯಾಗಿದ್ದರೆ ಅಥವಾ ಬೇರೆಯವರು ಮಾಡಿದ ಪಾಪಕ್ಕೆ ನಾವು ಭಾಗಿಯಾಗಿದ್ದರೆ ಆ ಪಾಪದಿಂದ ನಮ್ಮನ್ನು ಇಂದ್ರಾಗ್ನೀ ದೇವತೆಗಳು, ಮಿತ್ರಾ ವರುಣ ದೇವತೆಗಳು, ಸೋಮ, ಧಾತಾ ಹಾಗೂ ಬೃಹಸ್ಪತಿ ಈ ದೇವತೆಗಳು ಪಾರುಮಾಡಲಿ, ಎಂಬುದಾಗಿ ಪ್ರಾರ್ಥನೆ ಇದೆ.

ಈ ಮಂತ್ರದಲ್ಲಿ ''ಯದನ್ಯಕೃತಂ'' ಎಂಬಲ್ಲಿ ಬೇರೆಯವರು ಮಾಡಿದ ಪಾಪವು ನಮಗೆ ತಗಲುವುದು ಹೇಗೆ ಎಂಬ ವಿಷಯದಲ್ಲಿ ಒಂದು ಔಚಿತ್ಯವಿದೆ. ಜ್ಞಾನಿಯಾದ (ತತ್ವಜ್ಞಾನ ತಿಳಿದ) ಯೋಗಿಯನ್ನು ದ್ವೇಷಿಸುವವನನ್ನು ಆ ಜ್ಞಾನಿಯ ಪಾಪಗಳು ಸೇರುತ್ತವೆ. ಈ ವಿಷಯವನ್ನು ಭಗವತ್ಪಾದ ಶಂಕರರು ಸೂತ್ರಭಾಷ್ಯ-ದಲ್ಲಿ ''ತಸ್ಯ ಪುತ್ರಾದಾಯಮುಪಯಂತಿ ಸುಹೃದಸ್ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ'' ಎಂಬ ಶಾಟ್ಯಾಯನೀಯ ಶ್ರುತಿಯನ್ನು ಉದಾಹರಿಸಿ ಸ್ಪಷ್ಟಪಡಿಸಿದ್ದಾರೆ.

ಅಂತಹ ಮಹಾತ್ಮರ ಬಗ್ಗೆ ದ್ವೇಷ, ಅಸೂಯೆ, ನಿಂದೆ, ಅಪಪ್ರಚಾರವೇ ಮೊದಲಾದ ದುಷ್ಕೃತ್ಯಗಳು ನಮ್ಮಿಂದ ಮಾಡಲ್ಪಟ್ಟಿದ್ದರೆ ಅಂತಹ ಪಾಪಗಳನ್ನು ಹೋಗಲಾಡಿಸಿ ನಮ್ಮನ್ನು ಅನುಗ್ರಹಿಸಿರಿ.

5. ಸ್ಜಾತಶ್ಂಸಾದುತ ಜಾಮಿ ಶ್ಂಸಾಜ್ಜ್ಯಾಯಸಃ ಶಂ ಸಾದುತ ವಾ ಕನೀಯಸಃ ।
ಅನಾಧೃಷ್ಟಂ ದೇವಕೃತಂ ಯದೇನಸ್ತಸ್ಮಾತ್ತ್ವಮಸ್ಮಾಞ್ಜಾತವೇದೋ ಮುಮುಗ್ಧಿ ॥

**ಸಜಾತಾಃ**=ಸರಿಸಮನಾಗಿ ಹುಟ್ಟಿದವರು, ಅಂದರೆ ಒಂದೇ ಕುಟುಂಬದಲ್ಲಿ ಹುಟ್ಟಿದವರು, ಅಥವಾ ಸಮಾನ ವಯಸ್ಕರಾದ ಮಿತ್ರರು, ಅವರಿಂದ ನನ್ನ ಬಗ್ಗೆ ಮಾಡಲ್ಪಟ್ಟ , **ಶಂಸಃ**=ಪ್ರಶಂಸೆ, **ಉತ**=ಅಥವಾ, **ಜಾಮಯಃ**=ಹೆಂಡತಿಯಿಂದ ನನ್ನ ಬಗ್ಗೆ ಮಾಡಲ್ಪಟ್ಟ, **ಶಂಸಃ**=ಪ್ರಶಂಸೆ, **ಜ್ಯಾಯಾನ್**=ಹಿರಿಯ ಅಣ್ಣ ಅಥವಾ ವಿದ್ಯಾದಿಗಳಿಂದ ಹಿರಿಯನಾದವನು ಅವನ **ಶಂಸಃ**=ಹೊಗಳುವಿಕೆ, **ಉತ ವಾ**= ಅಥವಾ, **ಕನೀಯಾನ್**=ತಮ್ಮ (ಕಿರಿಯ) ಅಥವಾ ವಿದ್ಯಾದಿಗಳಿಂದ ಕಿರಿಯನು, **ಶಂಸಃ**=ಅವನು ನನ್ನ ಬಗ್ಗೆ ಮಾಡಿದ ಪ್ರಶಂಸೆ, **ತಸ್ಮಾತ್**=ಈ ಬಹುಜನರ ಹೊಗಳುವಿಕೆಯಿಂದ ಬೀಗಿದ (ಪ್ರಮತ್ತನಾದ) ನನ್ನಿಂದ, **ಅನಾಧೃಷ್ಟಂ ದೇವ ಕೃತಂ ಯದೇನಃ**=ಯಾವ ರೀತಿಯಿಂದಲೂ ಪರಿಹರಿಸಲು ಸಾಧ್ಯವಾಗದ, ದೇವತೆಗಳ ಬಗ್ಗೆ, ಮಾಡಿದ ಅಪರಾಧದಿಂದುಂಟಾದ ಪಾಪವು ಮಾಡಲ್ಪಟ್ಟಿದ್ದರೆ, ಆ ಪಾಪವನ್ನು **ಹೇ ಜಾತವೇದಃ**[2]=ಅಗ್ನಿ ದೇವನೇ! **ತ್ವಂ**=ನೀನು, **ಮುಮುಗ್ಧಿ**= ಹೋಗಲಾಡಿಸು.

ಅಗ್ನಿದೇವನೇ! ನೀನು, ಕುಟುಂಬದ ಸಹೋದರರ (ಜ್ಞಾತಿಗಳ) ಅಥವಾ ಸಮಾನ ವಯಸ್ಕರಾದ ಮಿತ್ರರ ಅಥವಾ ಹೆಂಡತಿಯ, ಅಥವಾ ಅಣ್ಣನ ಅಥವಾ ಕಿರಿಯ ಸಹೋದರನ (ವಿದ್ಯೆ ಮೊದಲಾದ ಸಂಪತ್ತಿನಲ್ಲಿ ಮತ್ತು ವಯಸ್ಸಿನಲ್ಲಿ ಕಿರಿಯನಾದ) ಗುಣಗಳ ಮಿಥ್ಯಾ ಆರೋಪರೂಪವಾದ ಅತಿಶಯದ ಹೊಗಳುವಿಕೆ (ಪ್ರಶಂಸೆ)ಯಿಂದ ಚಂಚಲಗೊಂಡ ಮನಸ್ಸುಳ್ಳವನಾಗಿ, ದುರಹಂಕಾರ ಹೊಂದಿ, ದೇವತೆಗಳ ವಿಷಯದಲ್ಲಿ ಅಕ್ಷಮ್ಯ ಅಪರಾಧವನ್ನು ಮಾಡಿದ್ದಿದ್ದರೆ ಅದರಿಂದುಂಟಾದ ಪಾಪದಿಂದ ನನ್ನನ್ನು ಮುಕ್ತಿಗೊಳಿಸು.

6. ಯದ್ವಾಚಾ ಯನ್ಮನಸಾ ಬಾಹುಭ್ಯಾಮೂರುಭ್ಯಾಮಷ್ಠೀವದ್ಭ್ಯಾಂ
ಶಿಶ್ನೈರ್ಯದನೃತಂ ಚಕೃಮಾ ವಯಂ । ಅಗ್ನಿರ್ಮಾ ತಸ್ಮಾದೇನಸಃ
ಪ್ರಮುಂಚತು ಚಕೃಮ ಯಾನಿ ದುಷ್ಕೃತಾ ॥

---

2. ಜಾತವೇದಃ — ಜಾತಾನಾಂ ಅವ್ಯಾಮೋಹೇನ ವೇದಿತಃ । ಉಂಟಾದಂತಹ ಗುಣದೋಷಗಳೆಲ್ಲವನ್ನೂ ಯಥಾರ್ಥವಾಗಿ ತಿಳಿಯುವವನು.

ಮಾತು ಮೊದಲಾದವುಗಳಿಂದ **ಯದನೃತಂ**=ಯಾವ ಪಾಪವನ್ನು **ವಯಂ ಚಕೃಮ**=ನಾವು ಮಾಡಿದ್ದೇವೋ, ಹೇಗೆಂದರೆ, **ವಾಚಾ**=ಮಾತಿನ ಮೂಲಕವಾಗಿ, ಸುಳ್ಳು ಹೇಳುವುದು, ಇತ್ಯಾದಿ, **ಮನಸಾ**=ಮನಸ್ಸಿನಲ್ಲಿ ಬೇರೆಯವರ ವಿನಾಶವನ್ನೇ ಬಯಸುವುದು, **ಬಾಹುಭ್ಯಾಂ**=ಕೈಗಳಿಂದ ಬ್ರಾಹ್ಮಣಾದಿಗಳ ಹಿಂಸೆ, **ಊರುಭ್ಯಾಂ**= ತೊಡೆಗಳಿಂದ ನಿಷಿದ್ಧವಾದ ಆಲಿಂಗನಾದಿಗಳು, **ಅಷ್ಠೀವದ್ಭ್ಯಾಂ**=ಮೊಣಕಾಲು-ಗಳಿಂದ (ಕಾಲುಗಳಿಂದ) ನಿಷಿದ್ಧ ಪ್ರದೇಶಕ್ಕೆ ಹೋಗುವುದು, **ಶಿಶ್ನೈಃ**=ಗುಪ್ತಾಂಗ-ದಿಂದ, ಇಲ್ಲಿ ಬಹುವಚನವು ಕಣ್ಣು ಮೊದಲಾದ ಇಂದ್ರಿಯಗಳನ್ನು ಉಪಲಕ್ಷಣ-ವಾಗಿ ತಿಳಿಸುತ್ತದೆ. **ಚಕ್ಷುಷಾ**=ಕಣ್ಣಿನಿಂದ ನಿಷಿದ್ಧ ದರ್ಶನ ಮಾಡುವುದು, ಕಿವಿಯಿಂದ ಕೇಳಬಾರದ್ದನ್ನು ಕೇಳುವುದು, **ತಸ್ಮಾತ್ ಏನಸಃ**=ಈ ಎಲ್ಲಾ ವಿಧವಾದ ಪಾಪಗಳನ್ನೂ ಹಾಗೂ **ಯಾನಿ ದುಷ್ಕೃತಾ**=ಇನ್ನೂ ಬೇರೇ ರೀತಿಯ ಪಾಪಗಳನ್ನೂ **ಚಕೃಮ**=ನಾವು ಮಾಡಿದ್ದರೆ, ಅವುಗಳನ್ನೂ ಸಹ, **ಅಗ್ನಿಃ**=ಅಗ್ನಿ ದೇವನಾದ ನೀನು **ಪ್ರಮುಂಚತು**=ನಾಶ ಮಾಡಿ ನಮ್ಮನ್ನು ಬಿಡುಗಡೆ ಮಾಡು.

ಮಾತು ಮೊದಲಾದವುಗಳಿಂದ ನಾವು ಯಾವ ಪಾಪವನ್ನು ಮಾಡಿದ್ದೇವೋ, ಅಂದರೆ ಸುಳ್ಳು ಹೇಳುವುದು, ಗುರುಗಳು, ಹಿರಿಯರು, ಸಜ್ಜನರೇ ಮೊದಲಾದವರಲ್ಲಿ ಅವಾಚ್ಯ ಮಾತನಾಡಿ, ಅವರ ಮನಸ್ಸನ್ನು ನೋಯಿಸುವುದು, ಮನಸ್ಸಿನಲ್ಲಿ ಸದಾ ಕಾಲ ಬೇರೆಯವರ ವಿನಾಶವನ್ನೇ ಬಯಸುವುದು, ಕೆಟ್ಟ ವಿಚಾರದಲ್ಲಿ ಸದಾ ಕಾಲ ತೊಡಗಿರುವುದು, ಕೈಗಳಿಂದ=ಗೋವು, ಬ್ರಾಹ್ಮಣರು ಮೊದಲಾದ ನಿರುಪದ್ರವಿ ಜೀವಿಗಳನ್ನು ಹಿಂಸಿಸುವುದು, ತೊಡೆಗಳಿಂದ ನಿಷಿದ್ಧ-ವಾದ ಆಲಿಂಗನಾದಿಗಳನ್ನು ನಡೆಸುವುದು, ನಿಷಿದ್ಧ ಪ್ರದೇಶಕ್ಕೆ ಹೋಗುವುದು, ನಿಷಿದ್ಧ ಸ್ತ್ರೀ ಸಂಗದಲ್ಲಿ ತೊಡಗುವುದು, ನಿಷಿದ್ಧವಾದವುಗಳನ್ನು ನೋಡುವುದು, ಗುರು, ದೇವತೆ, ಸಜ್ಜನರು, ಹಿರಿಯರು, ಹೀಗೆ ಈ ಮೊದಲಾದವರ ನಿಂದೆಯನ್ನು ಕೇಳುವುದು, ತಿನ್ನಬಾರದ್ದನ್ನು (ನಿಷಿದ್ಧವಾದದ್ದನ್ನು) ತಿನ್ನುವುದು, ಈ ಎಲ್ಲಾ ವಿಧ-ವಾದ ಪಾಪಗಳು, ಹಾಗೂ ಇನ್ನೂ ಬೇರೆಯಾದ ಪಾಪಗಳು ನಮ್ಮಿಂದ ಮಾಡಲ್ಪಟ್ಟಿ-ದ್ದರೆ, ಅಗ್ನಿದೇವನು ಆ ಪಾಪಗಳೆಲ್ಲವನ್ನೂ ನಾಶಮಾಡಿ ನಮ್ಮನ್ನು ಅನುಗ್ರಹಿಸಲಿ.

7. **ಯೇನ ತ್ರಿತೋ ಅರ್ಣವಾನ್ನಿರ್ಬಭೂವ ಯೇನ ಸೂರ್ಯಂ ತಮಸೋ ನಿರ್ಮುಮೋಚ । ಯೇನೇಂದ್ರೋ ವಿಶ್ವಾ ಅಜಹಾದರಾತೀಸ್ತೇನಾಹಂ ಜ್ಯೋತಿಷಾ ಜ್ಯೋತಿರಾನಶಾನ ಆಕ್ಷಿ ॥**

**ತ್ರಿತಃ**=ತ್ರಿತನೆಂಬ ಪುರುಷನು, **ಯೇನ ಜ್ಯೋತಿಷಾ ಅರ್ಣವಾತ್ ನಿರ್ಬಭೂವ**=ಯಾವ ಭಗವಂತನ ದಿವ್ಯವಾದ ತೇಜಸ್ಸಿನಿಂದ ಸಮುದ್ರ ಸಮಾನವಾದ (ಅತ್ಯಂತ ಮಹತ್ತರವಾದ) ಪಾಪದಿಂದ ನಿರ್ಮುಕ್ತನಾಗಿದ್ದನೋ, ಹಾಗೂ, **ಯೇನ**=ಯಾವ ತೇಜಸ್ಸಿನ ಪ್ರಭಾವದಿಂದ, **ಸೂರ್ಯಂ**=ಸೂರ್ಯನು, **ತಮಸಃ**=ಸ್ವರ್ಭಾನು ಎಂಬ ಹೆಸರಿನ ರಾಕ್ಷಸ(ರಾಹು)ನಿಂದ ಉಂಟಾದ ಕತ್ತಲೆಯಿಂದ **ನಿರ್ಮುಮೋಚ**=ಮುಕ್ತಿಗೊಳಿಸಲ್ಪಟ್ಟಿದ್ದನೋ, **ಇಂದ್ರ**=ಸ್ವರ್ಗಾಧಿಪತಿಯು, **ಯೇನ**=ಯಾವ ಪರಮಾತ್ಮನ ಜ್ಯೋತಿರೂಪವಾದ ತೇಜಸ್ಸಿನಿಂದ, **ವಿಶ್ವಾ ಅರಾತೀಃ**=ಎಲ್ಲಾ ಶತ್ರುಗಳನ್ನೂ, **ಅಜಹಾತ್**=ಕ್ಷಣಕಾಲದಲ್ಲಿ ನಾಶ ಮಾಡಿದನೋ, **ತೇನ ಜ್ಯೋತಿಷಾ**=ಆ ತೇಜಸ್ಸಿನಿಂದ, **ಅಹಮಾನಶಾನಃ**=ನಾನು ಎಲ್ಲಾ ಕಡೆಯಿಂದಲೂ ಸುತ್ತುವರಿಯಲ್ಪಟ್ಟವನಾಗಿ, **ಜ್ಯೋತಿರಾಕ್ಷಿ**=ಭಗವಂತನ ತೇಜಸ್ಸನ್ನು ಹೊಂದಿದವನಾಗಿದ್ದೇನೆ.

ಪರಮಾತ್ಮನ ದಿವ್ಯ ಜ್ಯೋತಿರೂಪವಾದ ತೇಜಸ್ಸಿನಿಂದ ತ್ರಿತನೆಂಬ ಪುರುಷನ ಸಮುದ್ರದೋಪಾದಿಯ ಮಹಾಪಾಪವು ವಿನಾಶವಾಯಿತು. ಹಾಗೂ ಸೂರ್ಯನು ಸ್ವರ್ಭಾನು (ರಾಹು) ಎಂಬ ರಾಕ್ಷಸನಿಂದ ಆವರಿಸಲ್ಪಟ್ಟ ಕತ್ತಲೆಯಿಂದ ಬಿಡುಗಡೆ ಹೊಂದಿದನು. ಈ ದಿವ್ಯವಾದ ತೇಜಸ್ಸಿನಿಂದಲೇ (ಜ್ಯೋತಿ) ದೇವೇಂದ್ರನು ಕ್ಷಣಕಾಲದಲ್ಲಿ ತನ್ನೆಲ್ಲಾ ವೈರಿಗಳನ್ನೂ ನಾಶಪಡಿಸಿದನು. ಆ ದಿವ್ಯವಾದ ತೇಜಸ್ಸಿನಿಂದ ನಾನು ಆವರಿಸಲ್ಪಟ್ಟವನಾಗಿ ಅಂತಹ ತೇಜಸ್ಸನ್ನು (ಜ್ಯೋತಿಯನ್ನು) ಹೊಂದಿದ್ದೇನೆ.

8. **ಯತ್ಕುಸೀದಮಪ್ರತೀತ್ತಂ ಮಯೇಹ ಯೇನ ಯಮಸ್ಯ ನಿಧಿನಾ ಚರಾಮಿ ।**
**ಏತತ್ತದಗ್ನೇ ಅನೃಣೋ ಭವಾಮಿ ಜೀವನ್ನೇವ ಪ್ರತಿ ತತ್ತೇ ದಧಾಮಿ ॥**

**ಇಹ**=ಈ ಜನ್ಮದಲ್ಲಿ **ಮಯಾ**=ನನ್ನಿಂದ ಸ್ವೀಕರಿಸಲ್ಪಟ್ಟ **ಯತ್ಕುಸೀದಂ**=ಸಾಲವು, **ಅಪ್ರತೀತ್ತಂ**=ತಿರುಗಿ ಕೊಡಲ್ಪಡಲಿಲ್ಲ, **ಯಮಸ್ಯ**=ಯಮಧರ್ಮರಾಜನ, **ನಿಧಿನಾ**=ನಿಧಿ(ಮೂಲಧನ)ರೂಪವಾದ, **ಯೇನ**=ಕೊಡಲ್ಪಡಬೇಕಾಗಿರುವ, ಸಾಲವನ್ನು ಹೊಂದಿದವನಾಗಿ, **ಚರಾಮಿ**=ಬದುಕಿದ್ದೇನೆ. **ಏತತ್**=ಈ ಕೂಶ್ಮಾಂಡ ಮಂತ್ರಗಳ ಹೋಮದಿಂದ, **ತತ್**=ಆ ಋಣದಿಂದ (ಸಾಲದ ಹೊರೆಯಿಂದ), **ಅನೃಣೋ ಭವಾಮಿ**=ಮುಕ್ತನಾಗುತ್ತೇನೆ. ಹಾಗೂ **ಹೇ ಅಗ್ನೇ!**=ಅಗ್ನಿದೇವನೇ!, **ತೇ ಪ್ರಸಾದಾತ್**=ನಿನ್ನ ಅನುಗ್ರಹದಿಂದ, **ಜೀವನ್ನೇವ**=ಈ ಜನ್ಮದಲ್ಲೇ, **ತತ್**=ಆ ಸಾಲವನ್ನು **ಪ್ರತಿ ದಧಾಮಿ**=ಹಿಂದಿರುಗಿ ಕೊಡುತ್ತೇನೆ.

ಈ ಜನ್ಮದಲ್ಲೆ ನಾನು ತೆಗೆದುಕೊಂಡ ಸಾಲವನ್ನು ಸಾಲಕೊಟ್ಟವರಿಗೆ ಹಿಂದಿರುಗಿಸಲಿಲ್ಲ, ದುಷ್ಟರಿಗೆ (ಪಾಪಿಗಳಿಗೆ) ಶಿಕ್ಷೆ ಕೊಡುವ ಅಧಿಕಾರಿಯಾದ ಯಮಧರ್ಮನ ನಿಧಿರೂಪವಾದ ಈ ಸಾಲದ ಹೊರೆಯನ್ನು ಹೊತ್ತು ಓಡಾಡುತ್ತಿದ್ದೇನೆ. ಈ ಕೂಶ್ಮಾಂಡ ಹೋಮದಿಂದ ಸಂಪ್ರೀತನಾದ ಅಗ್ನಿದೇವನು ಆ ಸಾಲದ ಹೊರೆಯ ಭಾರವನ್ನು ಹೋಗಲಾಡಿಸಿ, ನನ್ನನ್ನು ಋಣಮುಕ್ತ-ನನ್ನಾಗಿಸಲಿ, ಅಗ್ನಿದೇವನು ಈ ಸಾಲವನ್ನು ತೀರಿಸುವುದಕ್ಕೆ ಬೇಕಾದ ಸಂಪತ್ತನ್ನು ಒದಗಿಸಿ ಅನುಗ್ರಹವನ್ನು ಮಾಡಲಿ.

9. **ಯನ್ಮಯಿ ಮಾತಾ ಗರ್ಭೇ ಸತಿ । ಏನಶ್ಚಕಾರ ಯತ್ಪಿತಾ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚ ತು । ದುರಿತಾ ಯಾನಿ ಚಕೃಮ । ಕರೋತು ಮಾಮನೇನಸಮ್ ॥**

**ಮಯಿ ಗರ್ಭೇ ಸತಿ**=ನಾನು ಗರ್ಭರೂಪದಲ್ಲಿ ತಾಯಿಯ ಉದರವನ್ನು ಪ್ರವೇಶಿಸಿದಾಗ, **ಮಾತಾ ಯದೇನಶ್ಚಕಾರ**=ತಾಯಿಯು ಪಾಪ ಕಾರ್ಯಗಳನ್ನೇ-ನಾದರೂ ಮಾಡಿದ್ದರೆ, **ಪಿತಾ ಯದೇನಃ ಚಕಾರ**=ತಂದೆಯು ಯಾವುದಾದರೂ ಪಾಪವನ್ನು ಮಾಡಿದ್ದರೆ, **ತಸ್ಮಾತ್**=ತಂದೆ-ತಾಯಿಗಳಿಂದ ಮಾಡಲ್ಪಟ್ಟ, **ಏನಸಃ**= ಪಾಪದಿಂದ, **ಗಾರ್ಹಪತ್ಯಃ ಅಗ್ನಿಃ**=ಗೃಹಸ್ವಾಮಿಯಾದ (ಗಾರ್ಹಪತ್ಯವೆಂಬ ಹೆಸರುಳ್ಳ) ಅಗ್ನಿದೇವನು, **ಮಾ ಪ್ರಮುಂಚತು**=ನನ್ನನ್ನು ಬಿಡಿಸಲಿ, **ಯಾನಿ ದುರಿತಾ ಚಕೃಮ**=ಯಾವ ಬೇರೆ ನಿಮಿತ್ತವಾದ ಪಾಪ ಕರ್ಮಗಳನ್ನು ನಾವು-ಮಕ್ಕಳು-ಮೊಮ್ಮಕ್ಕಳು ಸಹಿತರಾಗಿ ಮಾಡಿರುತ್ತೇವೆಯೋ, ಆ ಪಾಪದಿಂದಲೂ **ಮಾಂ**= ನನ್ನನ್ನು, **ಅನೇಹಸಂ ಕರೋತು**=ಪಾಪ ರಹಿತನನ್ನಾಗಿ ಮಾಡು.

ಹೆಂಡತಿ ಗರ್ಭಿಣಿಯಾಗಿದ್ದಾಗ, ಗಂಡ-ಹೆಂಡತಿಯರಿಬ್ಬರೂ, ವ್ರಯಸ್ಥ-ರಾಗಿರುವುದು ಶಾಸ್ತ್ರಸಮ್ಮತ. ಹೀಗಿರುವಾಗ, ನಾನು ತಾಯಿಯ ಗರ್ಭವನ್ನು ಪ್ರವೇಶಿಸಿ, ಗರ್ಭವಾಸ ಮಾಡುತ್ತಿರುವ ಸಮಯದಲ್ಲಿ, ನನ್ನ ತಾಯಿ ಪರಪುರುಷ ಸೇವಾದಿ ಪಾಪವನ್ನು ಮಾಡಿದ್ದಿದ್ದರೆ, ಹಾಗೂ ನನ್ನ ತಂದೆ ನಿಷಿದ್ಧ ಸಮಯದಲ್ಲಿ, ನಿಷಿದ್ಧ ಮೈಥುನಾದಿ ಪಾಪಕಾರ್ಯವನ್ನು ಎಸಗಿದ್ದರೆ, (ತಂದೆ ತಾಯಿಗಳ ನಿಷಿದ್ಧ ಕರ್ಮದಿಂದ) ಆದರಿಂದ ಉಂಟಾದ ಪಾಪವು ಗರ್ಭದಲ್ಲಿರುವ ನನ್ನನ್ನೂ ಆವರಿಸುವುದರಿಂದ, ಅಗ್ನಿದೇವನೇ! ನೀನು ಪ್ರಸನ್ನನಾಗಿ ಆ ಪಾಪದಿಂದ ನನ್ನನ್ನು ಮುಕ್ತಿಗೊಳಿಸು. ಹಾಗೂ ನನ್ನ ಮಕ್ಕಳು, ಮತ್ತು ಮೊಮ್ಮಕ್ಕಳೂ ಸಹ ಬೇರೆ

ಕಾರಣಗಳಿಂದ ಯಾವುದಾದರೂ ಪಾಪವನ್ನು ಮಾಡಿದ್ದರೆ, ಆ ಪಾಪ ಕಾರ್ಯವನ್ನು ಮಾಡಿದ ಮಕ್ಕಳು ಮತ್ತು ಮೊಮ್ಮಕ್ಕಳನ್ನೂ ಪಾಪದ ಸಂಕೋಲೆಯಿಂದ ಪಾರು ಮಾಡು.

**10. ಯದಾ ಪಿಪೇಷ ಮಾತರಂ ಪಿತರಂ । ಪುತ್ರಃ ಪ್ರಮುದಿತೋ ಧಯನ್ ।**
**ಅಹಿಂಸಿತೌ ಪಿತರೌ ಮಯಾ ತತ್ । ತದಗ್ನೇ ಅನೃಣೋ ಭವಾಮಿ ॥**

**ಯದಾ ಪುತ್ರಃ**=ನಾನು ಶಿಶುವಾಗಿದ್ದಾಗ, **ಪ್ರಮುದಿತಃ**=ಅತ್ಯಂತ ಸಂತೋಷಗೊಂಡವನಾಗಿ, **ಧಯನ್**=ಸ್ತನ್ಯಪಾನ ಮಾಡುವಾಗ, **ಮಾತರಂ ಪಿಪೇಷ**=ತಾಯಿಯನ್ನು ಹಿಂಸೆಗೊಳಿಸಿದ್ದೆನು, **ತಥಾ ಪಿತರಂ**=ಹಾಗೂ ತಂದೆಯನ್ನೂ (ಮಡಿಲಿನಲ್ಲಿದ್ದು ಆಟವಾಡುವಾಗ) ಹಿಂಸೆಗೊಳಿಸಿದ್ದೆನು, **ತತ್**=ಆಗ, **ಮಯಾ**=ನನ್ನಿಂದ, **ಪಿತರೌ**=ತಂದೆ-ತಾಯಿಗಳಿಬ್ಬರೂ **ಅಹಿಂಸಿತೌ**=ಹಿಂಸೆ ಎಂದು ಭಾವಿಸಲಿಲ್ಲ. **ಅಗ್ನೇ**=ಅಗ್ನಿದೇವನೇ, **ತತ್**=ತಂದೆ ತಾಯಿಗಳ ವಿಷಯದಲ್ಲಿ ನಾನು ಪ್ರತ್ಯುಪಕಾರ ಮಾಡದೆ ಇರುವುದರಿಂದ ಉಂಟಾದ ಪಾಪದಿಂದ, **ಅನೃಣೋ ಭವಾಮಿ**=ನನ್ನನ್ನು ಮುಕ್ತನನ್ನಾಗಿಸು.

ನಾನು ಶಿಶುವಾಗಿದ್ದಾಗ ತಾಯಿಯ ಮಡಿಲಿನಲ್ಲಿ ಅತ್ಯಂತ ಸಂತೋಷದಿಂದ ಸ್ತನ್ಯಪಾನ ಮಾಡುವಾಗ ಕೈ ಹಾಗೂ ಕಾಲುಗಳಿಂದ ತಾಯಿಯನ್ನು ಹಿಂಸಿಸಿದ್ದೇನೆ, ಹಾಗು ತಂದೆಯ ಮಡಿಲಿನಲ್ಲಿ ಆಡುವಾಗ ತಂದೆಯನ್ನೂ, ಕೈ ಕಾಲುಗಳಿಂದ ಪೀಡಿಸಿದ್ದೇನೆ. ಆದರೆ ಆಗ ಅವರು ನನ್ನ ಬಗ್ಗೆ ವಾತ್ಸಲ್ಯದಿಂದ ಸಿಟ್ಟುಗೊಳ್ಳದೆ ಆ ಅಪರಾಧಗಳನ್ನು ಮನ್ನಿಸಿದರು. ಆದರೆ ಅದಕ್ಕೆ ಪ್ರತಿಯಾಗಿ ತಂದೆ ತಾಯಿಗಳಿಗೆ ಉಪಕಾರ ಮಾಡಲು ನನ್ನಿಂದ ಆಗಲಿಲ್ಲ. ಆ ಬಗ್ಗೆ ನಾನು ಅವರಲ್ಲಿ ಋಣಿಯಾಗಿದ್ದೇನೆ. ಅಗ್ನಿದೇವನೇ! ನೀನು ಆ ಅಪರಾಧದಿಂದುಂಟಾದ ಪಾಪವನ್ನು ಹೋಗಲಾಡಿಸಿ ನನ್ನನ್ನು ಋಣಮುಕ್ತನನ್ನಾಗಿ ಮಾಡು.

**11. ಯದ್ದಂತರಿಕ್ಷಂ ಪೃಥಿವೀಮುತ ದ್ಯಾಂ । ಯನ್ಮಾತರಂ ಪಿತರಂ ವಾ ಜಿಹಿಂಸಿಮ ।**
**ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ ಚಕೃಮ । ಕರೋತು ಮಾಮನೇನಸಮ್ ।**

**ಅಂತರಿಕ್ಷಂ ಪೃಥಿವೀಂ ಉತದ್ಯಾಂ**=ಅಂತರಿಕ್ಷ, ಪೃಥಿವೀ ಹಾಗೂ ದ್ಯುಲೋಕದಲ್ಲಿರುವವರಿಗೆ, **ಯತ್ ಜಿಹಿಂಸಿಮ**=ಯಾವ ಹಿಂಸೆಯನ್ನು ಉಂಟು

ಮಾಡಿದ್ದೇವೋ, ಹಾಗೂ **ಮಾತರಂ ಪಿತರಂ ವಾ**=ತಂದೆ ಮತ್ತು ತಾಯಿಯನ್ನು **ಯತ್ ಜಿಹಿಂಸಿಮ**=ಅನಿಷ್ಟಾಚರಣ ರೂಪವಾದ ಹಿಂಸೆಯಿಂದ ಪೀಡಿಸಿದ್ದೇವೋ, **ತಸ್ಮಾದೇನಸಃ**=ಅದರಿಂದುಂಟಾದ ಪಾಪವನ್ನು **ಗಾರ್ಹಪತ್ಯಃ ಅಗ್ನಿಃ**=ಗೃಹಪತಿಯಾದ ಅಗ್ನಿದೇವನೇ! ನೀನು, **ಪ್ರಮುಂಚತು**=ಹೋಗಲಾಡಿಸು. **ದುರಿತಾಯಾನಿಚಕೃಮ**=ಬೇರೆ ಯಾವ ಪಾಪವನ್ನು ಮಾಡಿದ್ದರೂ, **ಮಾಂ ಅನೇಹಸಂ ಕರೋತು**=ಅವುಗಳಿಂದ ನನ್ನನ್ನು ಮುಕ್ತನನ್ನಾಗಿಸು.

ಅಗ್ನಿದೇವನೇ! ಆಕಾಶ, ಪೃಥಿವೀ ಮತ್ತು ದೇವಲೋಕಗಳಲ್ಲಿರುವವರಿಗೆ ಹಾಗೂ ಜನ್ಮ ಕೊಟ್ಟ ತಂದೆ ತಾಯಿಗಳಿಗೆ ನಾವು ಅನಿಷ್ಟಾಚರಣರೂಪವಾದ ಹಿಂಸೆಯಿಂದ ಪೀಡಿಸಿದ್ದರೆ, ಆ ದೋಷದಿಂದುಂಟಾದ ಪಾಪದಿಂದ ನಮ್ಮನ್ನು ಬಿಡುಗಡೆಗೊಳಿಸಿ ಅನುಗ್ರಹಿಸು.

**12. ಯದಾಶಸಾ ನಿಶಸಾ ಯತ್ಪರಾಶಸಾ । ಯದೇನಶ್ಚಕೃಮಾ ನೂತನಂ ಯತ್ಪುರಾಣಂ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ ಚಕೃಮ । ಕರೋತು ಮಾಮನೇನಸಮ್ ॥**

**ಆಶಸಾ**=ಎದುರುಗಡೆ ಮಾಡಲ್ಪಟ್ಟಂತಹ ಹಿಂಸೆಯಿಂದ, ಯಾವ ಪಾಪವು ಉಂಟಾಗಿದೆಯೋ, **ನಿಶಸಾ**=ಬಹಳವಾಗಿ (ಉದ್ದೇಶ ಪೂರ್ವಕವಾಗಿ) ಮಾಡಲ್ಪಟ್ಟ ಹಿಂಸೆಯಿಂದ ಉಂಟಾದ ಪಾಪವು, ಮತ್ತು **ಪರಾಶಸಾ**=ಹಿಂದುಗಡೆಯಿಂದ ಮಾಡಿದ ಹಿಂಸೆಯಿಂದ ಉಂಟಾದ ಯಾವ ಪಾಪವಿದೆಯೋ, ಹಾಗೂ **ನೂತನಂ**=ಹೊಸದಾದ, ಮತ್ತು **ಪುರಾಣಂ**=ಹಳೆಯದಾದ (ಜನ್ಮಾಂತರದ) **ಯದೇನಃ**=ಯಾವ ಪಾಪವಿದೆಯೋ, ಅವುಗಳನ್ನು **ಗಾರ್ಹಪತ್ಯಃ ಅಗ್ನಿಃ**=ಗೃಹಪತಿಯಾದ ಅಗ್ನಿದೇವನು ಹೋಗಲಾಡಿಸಿ, **ಮಾಂ ಅನೇಹಸಂ ಕರೋತು**=ನನ್ನನ್ನು ಪಾಪ ರಹಿತನನ್ನಾಗಿ ಮಾಡಲಿ.

ಎದುರಿಗೆ ಮಾಡಿದ ಹಿಂಸೆಯಿಂದ ಮತ್ತು ಅತ್ಯಂತ ಹೆಚ್ಚಾದ, ಉದ್ದೇಶ-ಪೂರ್ವಕವಾಗಿ ಎಸಗಿದ ಹಿಂಸೆಯಿಂದ ಉಂಟಾದ ಪಾಪವು ನನ್ನಲ್ಲಿದ್ದರೆ, ಮತ್ತು ಈ ಜನ್ಮದಲ್ಲಿ ಮಾಡಿದ ಪಾಪವು ಹಾಗೂ ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪವು ಯಾವುದಿದೆಯೋ ಅವುಗಳನ್ನು ಅಗ್ನಿದೇವನು ಹೋಗಲಾಡಿಸಿ, ನನ್ನನ್ನು ನಿರ್ದೋಷಿಯನ್ನಾಗಿ ಮಾಡಲಿ.

**13. ಅತಿಕ್ರಾಮಾಮಿ ದುರಿತಂ ಯದೇನಃ । ಜಹಾಮಿ ರಿಪ್ರಂ ಪರಮೇ ಸಧಸ್ಥೇ । ಯತ್ರ ಯಂತಿ ಸುಕೃತೋ ನಾಪಿ ದುಷ್ಕೃತಃ । ತಮಾರೋಹಾಮಿ ಸುಕೃತಾಂ ನು ಲೋಕಮ್ ॥**

**ದುರಿತಂ**=ದುರ್ಗತಿಗೆ ಕಾರಣವಾದ, **ಯದೇನಃ**=ಯಾವ ಪಾಪವಿದೆಯೋ, ಅದನ್ನು **ಅತಿಕ್ರಾಮಾಮಿ**=ಅಗ್ನಿದೇವನ ಪ್ರಸಾದದಿಂದ ದಾಟುತ್ತೇನೆ (ಪರಿಹರಿಸಿ-ಕೊಳ್ಳುತ್ತೇನೆ) ಹಾಗೂ **ಪರಮೇ**=ಉತ್ಕೃಷ್ಟವಾದ, **ಸಧಸ್ಥೇ**=ವಿದ್ವಾಂಸರ ಸಭೆಯಲ್ಲಿ **ಕೃತಂ** ರಿಪ್ರಂ=ಮಾಡಲ್ಪಟ್ಟಂತಹ ಪಾಪವನ್ನೂ, **ಜಹಾಮಿ**=ಅಗ್ನಿದೇವನ ಅನುಗ್ರಹ-ದಿಂದ ದೂರೀಕರಿಸುತ್ತೇನೆ. **ಯತ್ರ**=ಯಾವಲೋಕದಲ್ಲಿ, **ಸುಕೃತೋಯಂತಿ**= ಪುಣ್ಯ ಮಾಡಿದವರು ಹೋಗುತ್ತಾರೋ, **ನಾಪಿ ದೃಷ್ಕೃತಃ**=ಪಾಪ ಮಾಡಿದವರು ಯಾವಾಗಲೂ ಹೋಗುವುದಿಲ್ಲವೋ, **ತಂ ಸುಕೃತಾಂ ಲೋಕಂ**=ಆ ಪುಣ್ಯವಂತ-ರಿರುವ ಲೋಕವನ್ನು, **ಆರೋಹಾಮಿ**=ಶೀಘ್ರವಾಗಿ ಏರುತ್ತೇನೆ.

ದುರ್ಗತಿಗೆ ಕಾರಣವಾದ ಪಾಪಶೇಷವನ್ನು ಅಗ್ನಿದೇವನ ಪ್ರಸಾದದಿಂದ ಹೋಗಲಾಡಿಸಿಕೊಳ್ಳುತ್ತೇನೆ. ಶ್ರೇಷ್ಠವಾದ ವಿದ್ವಾಂಸರ ಸಭೆಗಳಲ್ಲಿ ನನ್ನಿಂದ ಉಂಟಾದ ಪಾಪವಿದ್ದರೆ, ಅದನ್ನೂ ಅಗ್ನಿದೇವನ ಅನುಗ್ರಹದಿಂದ ಪರಿಹರಿಸಿ-ಕೊಳ್ಳುತ್ತೇನೆ. (ಅಗ್ನಿದೇವನು ಅನುಗ್ರಹಿಸಿ ಪರಿಹರಿಸಲಿ) ಯಾವ ಲೋಕಕ್ಕೆ ಪುಣ್ಯವಂತರು ಮಾತ್ರ ಒಯ್ಯಲ್ಪಡುವರೋ, ಪಾಪಿಷ್ಠರು ಯಾವಾಗಲೂ ಒಯ್ಯಲ್ಪಡುವುದಿಲ್ಲವೋ, ಅಂತಹ ಪುಣ್ಯಲೋಕವನ್ನು ಬೇಗನೆ ಸೇರುತ್ತೇನೆ.

**14. ತ್ರಿತೇ ದೇವಾ ಅಮೃಜತೈತದೇನಃ । ತ್ರಿತ ಏತನ್ಮನುಷ್ಯೇಷು ಮಾಮೃಜೇ । ತತೋ ಮಾ ಯದಿ ಕಿಂಚಿದಾನಶೇ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾಯಾನಿ ಚಕೃಮ । ಕರೋತು ಮಾಮನೇನಸಮ್ ॥**

**ತ್ರಿತೇ**[3]=ತ್ರಿತನೆಂಬ ಪುರುಷನಲ್ಲಿ, **ದೇವಾಃ**=ದೇವತೆಗಳು, **ಏತದೇನಃ**= ಪುರೋಡಾಶ ಸಂಬಂಧಿಯಾದ ಪಾಪವನ್ನು, **ಅಮೃಜತ**=ಇಟ್ಟರು (ಲೇಪಿಸಿದರು.) **ತ್ರಿತಃ**=ಆ ತ್ರಿತನು, **ಏತತ್**=ಆ ಪಾಪಶೇಷವನ್ನು, **ಮನುಷ್ಯೇಷು**=ಸೂರ್ಯೋದಯ ಮತ್ತು ಸೂರ್ಯಾಸ್ತ ಕಾಲದಲ್ಲಿ ಮಲಗಿರುವ (ನಿದ್ರಿಸುವ) ಮನುಷ್ಯರಲ್ಲಿ, **ಮಾಮೃಜೆ**=

3. ಪುರೋಡಾಶ ಕಾಂಡದಲ್ಲಿ ತ್ರಿತನ ಉತ್ಪತ್ತಿ ಹೇಳಿದೆ. ಉರಿಯುತ್ತಿರುವ ಅಂಗಾರದ ಮೇಲೆ ನೀರಿನ ಹನಿ ಬಿದ್ದುದರಿಂದ ಇವನು ಹುಟ್ಟಿದನು.

ಲೇಪಿಸಿದನು (ಸ್ಥಾಪಿಸಿದನು), **ತತೋ**=ಆ ಪಾಪದ ಯಾವೊಂದು ಅಂಶವು, **ಯದಿ**=ಒಂದೊಮ್ಮೆ, **ಮಾ**=ನನ್ನಲ್ಲಿ, **ಕಿಂಚಿದಾನಶೇ**=ಸೇರಿದ್ದರೆ, **ಗಾರ್ಹಪತ್ಯಃ ಅಗ್ನಿಃ**=ಅಗ್ನಿ ಭಗವಂತನು, **ಪ್ರಮುಂಚತು**=ಆ ಪಾಪವನ್ನು ಹೋಗಲಾಡಿಸಲಿ.

ದೇವತೆಗಳು ಪುರೋಡಾಶ ಸಂಬಂಧಿಯಾದ ದೋಷದಿಂದುಂಟಾದ ಪಾಪವನ್ನು ತ್ರಿತನೆಂಬ ಪುರುಷನಲ್ಲಿ ಇಟ್ಟರು, ಆ ತ್ರಿತನು ಸೂರ್ಯೋದಯ ಮತ್ತು ಸೂರ್ಯಾಸ್ತಮಾನ ಕಾಲದಲ್ಲಿ ಮಲಗಿರುವ ಮನುಷ್ಯರಲ್ಲಿ ಆ ಪಾಪವನ್ನು ಲೇಪಿಸಿದನು. ಒಂದೊಮ್ಮೆ ಆ ಪಾಪದ ಲೇಶವು ನನ್ನಲ್ಲೇನಾದರೂ ಸೇರಿದ್ದರೆ ಅಗ್ನಿದೇವನು ಅನುಗ್ರಹಿಸಿ ನನ್ನನ್ನು ಆ ಪಾಪದಿಂದ ಬಿಡುಗಡೆಗೊಳಿಸಲಿ.

**15. ದಿವಿ ಜಾತಾ ಅಪ್ಸು ಜಾತಾಃ । ಯಾ ಜಾತಾ ಓಷಧೀಭ್ಯಃ । ಅಥೋ ಯಾ ಅಗ್ನಿಜಾ ಆಪಃ । ತಾನಃ ಶುಂಧಂತು ಶುಂಧನೀಃ ॥**

**ದಿವಿ ಜಾತಾಃ**=ದ್ಯುಲೋಕದಲ್ಲಿ (ದೇವಲೋಕದಲ್ಲಿ) ಹುಟ್ಟಿದ ನಿತ್ಯವಾದ ನೀರುಗಳು, **ಅಪ್ಸುಜಾತಾಃ**=ಬಾವಿಗಳಿಂದ (ಅಗೆಯುವಿಕೆಯಿಂದ) ಹೊರಬಂದ ನೀರುಗಳು, **ಯಾಃ ಓಷಧೀಭ್ಯಃ ಜಾತಾಃ**=ವನಸ್ಪತಿಗಳಿಂದ (ಗಿಡ ಮರಗಳಿಂದ) ರಸರೂಪವಾದ ನೀರು ಯಾವುದು ಹುಟ್ಟಿದೆಯೋ, **ಅಥೋ**=ಹಾಗೂ, **ಯೇ ಅಗ್ನಿಜಾ ಆಪಃ**=ಮಿಂಚಿನಿಂದ (ಸೂರ್ಯನ ಕಿರಣಗಳಿಂದ ಉಂಟಾದ) ಮಳೆಯ ನೀರು, **ತಾಃ ಶುಂಧನೀಃ**=ಸಮಸ್ತ ಲೋಕವನ್ನೂ ಪರಿಶುದ್ಧಿಗೊಳಿಸುವ ಆ ಎಲ್ಲಾ ರೀತಿಯ ನೀರುಗಳು, **ನಃ**=ನಮ್ಮನ್ನು, **ಶುಂಧಂತು**=ಶುದ್ಧಿಗೊಳಿಸಲಿ.

ದೇವಲೋಕದಲ್ಲಿರುವ ನಿತ್ಯ ಜಲಗಳು, ಮತ್ತು ಬಾವಿಗಳಿಂದ ಹೊರಬರುವ ನೀರುಗಳು, ಹಾಗೂ ವನಸ್ಪತಿಗಳ ರಸರೂಪವಾದ ಜಲಗಳು ಮತ್ತು ಮಳೆಯ ನೀರು, ಹೀಗೆ ಈ ಸಮಸ್ತ ಜಗತ್ತನ್ನೂ ಪರಿಶುದ್ಧಿಗೊಳಿಸುವ ಜಲದೇವತೆಗಳು ನಮ್ಮನ್ನು ಪಾಪನಿರ್ಮುಕ್ತರನ್ನಾಗಿ ಪವಿತ್ರಗೊಳಿಸಲಿ.

**16. ಯದಾಪೋ ನಕ್ತಂ ದುರಿತಂ ಚರಾಮ । ಯದ್ವಾ ದಿವಾ ನೂತನಂ ಯತ್ಪುರಾಣಂ । ಹಿರಣ್ಯವರ್ಣಾಸ್ತತ ಉತ್ಪುನೀತ ನಃ ॥**

**ಯದಾಪಃ**=ಜಲದೇವತೆಗಳೇ! **ನಕ್ತಂ**=ರಾತ್ರಿಯಲ್ಲಿ, **ಯದ್ದುರಿತಂ ಚರಾಮ**= ಯಾವ ಪಾಪವನ್ನು ಮಾಡಿದ್ದೇವೋ, **ಯದ್ವಾದಿವಾ**=ಹಾಗೂ ಹಗಲಿನಲ್ಲಿ ಯಾವ ಪಾಪಕರ್ಮವನ್ನು ಮಾಡಿದ್ದೇವೋ, **ನೂತನಂ**=ಹೊಸದಾಗಿ ಮಾಡಿದ (ಈ

ಜನ್ಮದ), **ಪುರಾಣಂ**=ಹಿಂದಿನ ಜನ್ಮದಲ್ಲಿ ಮಾಡಿದ ಯಾವ ಪಾಪವಿದೆಯೋ, ಅವುಗಳನ್ನು **ಹಿರಣ್ಯವರ್ಣಾಃ**=ಬಂಗಾರದಂತೆ ತೇಜಸ್ವಿಯಾದ ನೀವು, **ನಃ**=ನಮ್ಮನ್ನು, **ತತ ಉತ್ಪುನೀತ**=ಆ ಎಲ್ಲಾ ಪಾಪಗಳಿಂದ ಮುಕ್ತಿಗೊಳಿಸಿ.

ಈ ಮಂತ್ರದಲ್ಲಿ ಜಲದೇವತೆಗಳನ್ನು ಕುರಿತು ಪ್ರಾರ್ಥನೆ ಇದೆ. ಬಂಗಾರದಂತೆ ತೇಜಸ್ವಿಗಳಾದ ಜಲದೇವತೆಗಳು, ರಾತ್ರಿಯಲ್ಲಿ, ಹಗಲಿನಲ್ಲಿ, ಈ ಜನ್ಮದಲ್ಲಿ ಹಾಗೂ ಜನ್ಮಾಂತರದಲ್ಲಿ ನಾವು ಮಾಡಿದ ಎಲ್ಲಾ ಪಾಪಗಳನ್ನೂ ನಾಶಮಾಡಿ ನಮ್ಮನ್ನು ಶುದ್ಧಿಗೊಳಿಸಲಿ.

**17. ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯು- ರಾಚಕೇ ॥**

**ವರುಣ**=ಎಲೈ ವರುಣದೇವನೇ! **ಮೇ ಇಮಂ ಹವಂ**=ನನ್ನ ಈ ಪ್ರಾರ್ಥನೆಯನ್ನು, **ಶ್ರುಧೀ**=ಕೇಳು (ಕೇಳಿಸಿಕೊಂಡು), **ಅದ್ಯ ಆ ಮೃಡಯ**=ನಮಗೆ ಸಂತೋಷವನ್ನು ಉಂಟುಮಾಡು. **ಅವಸ್ಯುಃತ್ವಾಂ**=ಪಾಲಿಸುವ ಇಚ್ಛೆಯುಳ್ಳ ನಿನ್ನನ್ನು, **ಅಹಂ**=ನಾನು, **ಆಚಕೆ**=ಪ್ರಾರ್ಥಿಸುತ್ತೇನೆ.

ಪಾಪದ ಪಾಶದಿಂದ ಬಿಡಿಸುವ ವರುಣನನ್ನು ಕುರಿತು ಇಲ್ಲಿ ಪ್ರಾರ್ಥನೆ ಇದೆ. ವರುಣ ದೇವನೇ! ನಮ್ಮ ಪ್ರಾರ್ಥನೆಗೆ ಓಗುಟ್ಟು ನಮಗೆ ಸುಖವನ್ನು ಅನುಗ್ರಹಿಸು. ಲೋಕವನ್ನೇ ಪಾಲಿಸುವ ನಿನ್ನನ್ನು ನಾನು ಸುಖಕ್ಕಾಗಿ ಪ್ರಾರ್ಥಿಸುತ್ತೇನೆ.

**18. ತತ್ತ್ವಾಯಾಮಿ ಬ್ರಹ್ಮಣಾ ವನ್ದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ। ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರಮೋಷೀಃ ॥**

**ತತ್** = ರಕ್ಷಣೆಗೋಸ್ಕರವಾಗಿ, **ಬ್ರಹ್ಮಣಾವಂದಮಾನಃ** = ಮಂತ್ರಗಳಿಂದ ಸ್ತುತಿಸಲ್ಪಡುವ, **ತ್ವಾಂ**=ನಿನ್ನನ್ನು, **ಯಾಮಿ**=ಹೊಂದುತ್ತೇನೆ. **ಯಜಮಾನಃ**=ಈ ಯಜಮಾನನು (ಹೋಮ ಮಾಡುತ್ತಿರುವವನು), **ಹವಿರ್ಭಿಃ**=ಹವಿಸ್ಸುಗಳಿಂದ ನಿನ್ನನ್ನು ಆರಾಧಿಸಿ, **ತತ್ ಆಶಾಸ್ತೇ**=ನಿನ್ನ ರಕ್ಷಣೆಯನ್ನು ಬೇಡುತ್ತಾನೆ. **ವರುಣ**= ವರುಣ ದೇವನೇ! **ಅಹೇಳಮಾನಃ**=ಸಿಟ್ಟುಗೊಳ್ಳದೇ ಇರುವವನಾಗಿ (ನೀನು), **ಇಹ**=ಈ ಯಜ್ಞದಲ್ಲಿ, **ಬೋಧಿ**=ನಮ್ಮ ಪ್ರಾರ್ಥನೆಯನ್ನು ಆಲಿಸು, **ಉರುಶಂಸ**=

ಬಹುತರವಾಗಿ ಸ್ತುತಿಸಲ್ಪಡುವ (ಬಹುಜನರಿಂದ) ನೀನು, **ನಃ**=ನಮ್ಮ, **ಆಯುಃ**=ಆಯಸ್ಸನ್ನು, **ಮಾ ಪ್ರಮೋಷೀಃ**=ಕಡಿಮೆ ಮಾಡಬೇಡ.

ವರುಣದೇವನೇ! ಪಾಪದ ಸಂಕೋಲೆಯಿಂದ ಈ ಪ್ರಪಂಚವನ್ನೇ ರಕ್ಷಿಸುವ ನೀನು, ಅನೇಕ ವಿಧವಾದ ಮಂತ್ರಗಳಿಂದ ಸ್ತುತಿಸಲ್ಪಟ್ಟವನಾಗಿದ್ದೀಯೆ. ನನ್ನ ರಕ್ಷಣೆಗೋಸ್ಕರವಾಗಿ (ಪಾಪ ನಿವಾರಣೆಗಾಗಿ) ನಾನು ಈ ಹೋಮದ ಮೂಲಕ-ವಾಗಿ ಹವಿಸ್ಸನ್ನು ಸಮರ್ಪಿಸಿ, ನಿನ್ನನ್ನು ಆರಾಧಿಸುತ್ತ, ನಿನ್ನಿಂದ ಅಭಯವನ್ನು ಬೇಡುತ್ತೇನೆ. ಕೋಪಗೊಳ್ಳದೆ ಈ ಯಜ್ಞದಲ್ಲಿ, ನಮ್ಮಿಂದ ಸಮರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ, ನಮ್ಮ ಪ್ರಾರ್ಥನೆಯನ್ನು ಮನ್ನಿಸು. ಅನೇಕರಿಂದ ಅನೇಕ ವಿಧವಾಗಿ ಸ್ತುತಿಸಲ್ಪಡುವ ನೀನು ನಮ್ಮ ಆಯುಷ್ಯವನ್ನು ಕಡಿಮೆ ಮಾಡಬೇಡ. ಆಯುಷ್ಯವನ್ನು ವರ್ಧಿಸಿ ಅನುಗ್ರಹಿಸು.

**19. ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಳೋವಯಾಸಿಸೀಷ್ಠಾಃ ।
ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಂಸಿ ಪ್ರಮುಮುಗ್ಧ್ಯ ಸ್ಮತ್ ॥**

**ಅಗ್ನೇ**=ಅಗ್ನಿದೇವನೇ! **ತ್ವಂ**=ನೀನು, **ನಃ**=ನಮ್ಮ ಭಕ್ತಿಯನ್ನು ತಿಳಿದವನಾಗಿ, **ವರುಣಸ್ಯ ದೇವಸ್ಯ**=ವರುಣ ದೇವನ, **ಹೇಳೋ**=ನಮ್ಮ ವಿಷಯದಲ್ಲಿರುವ ಕೋಪ-ವನ್ನು, **ಅವಯಾಸಿಸೀಷ್ಠಾಃ**=ಹೋಗಲಾಡಿಸು. **ಯಜಿಷ್ಠಃ**=ಯಾಗವನ್ನು ಚೆನ್ನಾಗಿ ನಡೆಸಿಕೊಂಡು ಹೋಗುವ (ಯಾಗದಲ್ಲಿ ಹೆಚ್ಚಾಗಿ ಪೂಜಿಸಲ್ಪಡುವ), **ವಹ್ನಿತಮಃ**=ಸರಿಯಾದ ರೀತಿಯಲ್ಲಿ ದೇವತೆಗಳ ಹವಿಸ್ಸನ್ನು ಒಯ್ಯುವ, **ಶೋಶುಚಾನಃ**=ಚೆನ್ನಾಗಿ ಪ್ರಜ್ವಲಿಸುವ, ನೀನು, **ವಿಶ್ವಾ ದ್ವೇಷಾಂಸಿ**=ನಮ್ಮ ಎಲ್ಲಾ ವಿರೋಧಿಗಳಿಂದುಂಟಾದ ದ್ವೇಷಗಳಿಂದ, **ಅಸ್ಮತ್ ಪ್ರಮುಮುಗ್ಧಿ**=ನಮ್ಮನ್ನು ಬಿಡಿಸು.

ಅಗ್ನಿದೇವನೇ! ನಮ್ಮ ನಿಷ್ಕಲ್ಮಷವಾದ ಭಕ್ತಿಯನ್ನು ನೀನು ತಿಳಿದವನಾಗಿ, ವರುಣದೇವನಿಗೆ ನಮ್ಮ ಮೇಲಿರುವ ಕೋಪವನ್ನು ಶಾಂತಗೊಳಿಸು. ಯಾಗವನ್ನು ಚೆನ್ನಾಗಿ ನಡೆಸಿಕೊಂಡು ಹೋಗುವಂತೆ ಮಾಡುವ ಮತ್ತು ದೇವತೆಗಳ ಹವಿಸ್ಸನ್ನು ಸರಿಯಾದ ಕ್ರಮದಲ್ಲಿ ಒಯ್ದು ತಲುಪಿಸುವ, ತೇಜಸ್ವಿಯಾದ ನೀನು, ನಮ್ಮ ವಿರೋಧಿಗಳಿಂದುಂಟಾದ ಎಲ್ಲಾ ದ್ವೇಷಗಳಿಂದ (ತನ್ನಿಮಿತ್ತವಾಗಿ ನಮ್ಮ ಮೇಲೆ ಎಸಗುವ ದುಷ್ಕೃತ್ಯಗಳಿಂದ) ನಮ್ಮನ್ನು ಬಿಡಿಸಿ ನಮ್ಮನ್ನು ರಕ್ಷಿಸು.

**20. ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ । ಅವಯಕ್ಷ್ವ ನೋ ವರುಣಂ ರರಾಣೋ ವೀಹಿ ಮೃಡೀಕಂ ಸುಹವೋ ನ ಏಧಿ ॥**

**ಅಗ್ನೇ**=ಅಗ್ನಿದೇವನೇ! **ಸಃ ತ್ವಂ**=(ಹಿಂದಿನ ಮಂತ್ರದಲ್ಲಿ ತಿಳಿಸಿದಂತೆ) ಶ್ರೇಷ್ಠನಾದ ನೀನು, **ಅಸ್ಮಾಕಂ ವಾತ್ಯಾ**=ನಮ್ಮ ರಕ್ಷಣಾಪೇಕ್ಷೆಯನ್ನು ಮನ್ನಿಸಿ, **ಅವಮೋಭವ**=ರಕ್ಷಕನಾಗು, **ಅಸ್ಯಾಃ ಉಷಸೋ ವ್ಯುಷ್ಟೌ ನೇದಿಷ್ಠಃ**=ಇಂದಿನ ಉಷಃ ಕಾಲದ ನಂತರದಲ್ಲಿ ಬರುವ ಅತ್ಯಂತ ಸನ್ನಿಹಿತವಾದ ಪ್ರಾತಃಕಾಲದಲ್ಲಿ, **ವರುಣಂ**= ವರುಣದೇವನಿಂದ ಉಂಟಾದ ಅಭೀಷ್ಟಗಳನ್ನು ನಿವಾರಿಸುವ ಪಾಪಗಳನ್ನು, **ಅವಯಕ್ಷ್ವ**=ನಾಶಪಡಿಸು, **ರರಾಣಃ**=ಸಂತೋಷಗೊಂಡವನಾಗಿ, **ಮೃಡೀಕಂ**= ಸುಖಸಾಧನವಾದ (ಸಂತೋಷಗೊಳಿಸುವ), **ನಃ**=ನಮ್ಮಿಂದ ಸಮರ್ಪಿಸಲ್ಪಟ್ಟ ಹವಿಸ್ಸನ್ನು, **ವೀಹಿ**=ಸ್ವೀಕರಿಸು, ಹಾಗೂ **ನಃ**=ನಮ್ಮ, **ಸುಹವಃ ಏಧಿ**=ಸಂತೋಷದ ಆಹ್ವಾನವನ್ನು ಮನ್ನಿಸಿ, ನಮ್ಮ ಅಭಿವೃದ್ಧಿಯನ್ನು ದಯಪಾಲಿಸು.

ಶ್ರೇಷ್ಠನಾದ ಅಗ್ನಿದೇವನೇ! ನೀನು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ನಮ್ಮನ್ನು ಸದಾ ರಕ್ಷಿಸು. ಇಂದಿನ ಬೆಳಿಗ್ಗೆ ವರುಣದೇವನ ಕೋಪದಿಂದ ಉಂಟಾದ ಸುಖವನ್ನು ಬಾಧಿಸುವ ಪಾಪಾದಿಗಳನ್ನು ನಾಶ ಪಡಿಸಿ, ನಮ್ಮ ಅಭೀಷ್ಟವನ್ನು ನೇರವೇರುವಂತೆ ಮಾಡು. ಸಂತೋಷಗೊಂಡವನಾದ ನೀನು ನಮ್ಮಿಂದ ಈ ಹೋಮದಲ್ಲಿ ಸಮರ್ಪಿಸಲ್ಪಟ್ಟ ಹವಿಸ್ಸನ್ನು ಸ್ವೀಕರಿಸಿ ನಮ್ಮ ಅಭಿವೃದ್ಧಿಯನ್ನು ಅನುಗ್ರಹಿಸು.

**21. ತ್ವಮಗ್ನೇ ಅಯಾಸಿ । ಅಯಾಸನ್ಮನಸಾಹಿತಃ । ಅಯಾ ಸನ್ಹವ್ಯಮೂಹಿಷೇ । ಅಯಾನೋ ಧೇಹಿ ಭೇಷಜಮ್ ॥**

**ಅಗ್ನೇ**=ಅಗ್ನಿದೇವನೇ, **ತ್ವಂ ಅಯಾಸಿ**=ನೀನು ಸರ್ವಗತನಾಗಿದ್ದೀಯೆ, ಈ ಪ್ರಪಂಚವನ್ನೇ ವ್ಯಾಪಿಸಿದ್ದೀಯೆ. **ಅಯಾಸನ್**=ಜಗತ್ತನ್ನು ವ್ಯಾಪಿಸಿದವನಾಗಿದ್ದರೂ, **ಮನಸಾ**=ಯಜಮಾನನ ಮನಸ್ಸಿನಲ್ಲಿ, **ಆಹಿತಃ**=ನಿಂತುಕೊಂಡಿದ್ದೀಯೆ (ಇದ್ದೀಯೆ), **ಅಯಾಸನ್**=ಸ್ವಾಭಾವಿಕವಾಗಿಯೆ, ಸರ್ವಗತನಾಗಿದ್ದರೂ, **ಹವ್ಯಂ ಊಹಿಷೇ**= ನಿರ್ದಿಷ್ಟವಾದ ದೇಶ ವಿಶೇಷಕ್ಕೆ ಸಮರ್ಪಿಸಲ್ಪಟ್ಟ ಹವಿಸ್ಸನ್ನು ಒಯ್ಯುತ್ತೀಯೆ, **ಅಯಾಃ**=ಸರ್ವಗತನಾಗಿದ್ದು, **ನೋ**=ನಮಗೆ, **ಭೇಷಜಂ ಧೇಹಿ**=ಔಷಧವನ್ನು ಪಾಲಿಸು, ರೋಗನಿವಾರಣೆಯನ್ನುಂಟುಮಾಡು.

ಅಗ್ನಿದೇವನೇ! ನೀನು ವಿಶ್ವವ್ಯಾಪಕನಾಗಿದ್ದರೂ, ಯಜಮಾನನ ಮನಸ್ಸಿನಲ್ಲಿ ನಿಂತಿದ್ದೀಯೆ. ಸ್ವಾಭಾವಿಕವಾಗಿ ನೀನು ಜಗತ್ತನ್ನು ವ್ಯಾಪಿಸಿದ್ದರೂ, ಯಜ್ಞದಲ್ಲಿ ಸಮರ್ಪಿಸಿದ ಹವಿರ್ಭಾಗವನ್ನು, ನಿರ್ಧಿಷ್ಟವಾದ ದೇವತೆಗಳಿಗೆ ಸರಿಯಾದ ರೀತಿಯಲ್ಲಿ ಒಯ್ಯುವವನಾಗಿದ್ದೀಯೆ, ಈ ಹವಿಸ್ಸಿನಿಂದ ಸಂತುಷ್ಟನಾದ ನೀನು ನಮ್ಮಲ್ಲಿ ಔಷಧ ಶಕ್ತಿಯನ್ನು (ರೋಗ ನಿರೋಧಕ ಶಕ್ತಿ) ಉಂಟುಮಾಡು, ಅಥವಾ ಔಷಧ ಶಕ್ತಿಯಿಂದ ನಮ್ಮನ್ನು ಪೋಷಿಸು.

22. ಯದದೀವ್ಯನ್ನೃಣಮಹಂ ಬಭೂವಾದಿತ್ಸನ್ವಾ ಸಂಜಗರ ಜನೇಭ್ಯಃ । ಅಗ್ನಿರ್ಮಾ ತಸ್ಮಾದಿಂದ್ರಶ್ಚ ಸಂವಿದಾನೌ ಪ್ರಮುಂಚತಾಮ್ ॥

**ಅಹಂ ಅದೀವ್ಯನ್**=ನಾನು ಪುತ್ರಾದಿಗಳನ್ನು ರಕ್ಷಿಸಲು ಅಸಮರ್ಥನಾಗಿ, **ಯತ್ ಋಣಂ ಬಭೂವ**=ಯಾವ ಋಣವನ್ನು ಹೊಂದಿದ್ದೇನೋ, ಅಥವಾ ಆ ಸಾಲದ ಹಣವನ್ನು, **ಜನೇಭ್ಯಃ**=ಸಾಲ ಕೊಟ್ಟವರಿಗೆ, **ಅದಿತ್ಸನ್**=ಹಿಂದಿರುಗಿಸಲು ಇಚ್ಛೆ ಇಲ್ಲದವನಾಗಿ, **ಸಂಜಗರ**=ಚೆನ್ನಾಗಿ ತಿಂದಿದ್ದೇನೆ. **ಅಗ್ನಿಃ ಇಂದ್ರಶ್ಚ ಸಂವಿದಾನೌ**=ಅಗ್ನಿ ಮತ್ತು ಇಂದ್ರರು ಒಟ್ಟಿಗೆ ಸೇರಿಕೊಂಡು, **ಮಾ**=ನನ್ನನ್ನು, **ತಸ್ಮಾತ್**=ಆ ಸಾಲದಿಂದ, **ಮುಂಚತಾಮ್**=ಬಿಡಿಸಲಿ.

ನಾನು ನನ್ನ ಹೆಂಡತಿ ಮಕ್ಕಳನ್ನು ಅನ್ನ ಪಾನಾದಿಗಳಿಂದ ರಕ್ಷಿಸಲು ಅಸಮರ್ಥ-ನಾಗಿ ಸಾಲವನ್ನು ಪಡೆದಿದ್ದು ಅದನ್ನು ಸಾಲಕೊಟ್ಟವರಿಗೆ ಹಿಂದಿರುಗಿಸಿಕೊಡಲು ಮನಸ್ಸಿಲ್ಲದೇ ಆ ಸಾಲವನ್ನು ನುಂಗಿ ಹಾಕಿದ್ದರೆ, ಅಗ್ನಿ ಮತ್ತು ಇಂದ್ರರು ಸೇರಿ ಆ ಸಾಲದ ಋಣದಿಂದ ನನ್ನನ್ನು ಬಿಡಿಸಲಿ. ಆ ಋಣದಿಂದ ಉಂಟಾದ ಪಾಪದಿಂದ ನನ್ನನ್ನು ಮುಕ್ತನನ್ನಾಗಿಸಲಿ.

23. ಯದ್ಧಸ್ತಾಭ್ಯಾಂ ಚಕರ ಕಿಲ್ಬಿಷಾಣ್ಯಕ್ಷಾಣಾಂ ವಗ್ನುಮುಪಜಿಘ್ನಮಾನಃ । ಉಗ್ರಂಪಶ್ಯಾ ಚ ರಾಷ್ಟ್ರಭೃಚ್ಚ ತಾನ್ಯಪ್ಸರಸಾವನುದತ್ತಾಮೃಣಾನಿ ॥

**ಯತ್ ಕಿಲ್ಬಿಷಾಣಿ ಹಸ್ತಾಭ್ಯಾಂ ಚಕರ**=ಯಾವ ಪಾಪವನ್ನು, ದ್ರವ್ಯಾಪ-ಹರಣಾದಿ ರೂಪದಲ್ಲಿ ಕೈಗಳಿಂದ ಮಾಡಿದ್ದೇನೋ, **ಅಕ್ಷಾಣಾಂ**=ಕಣ್ಣು ಮೊದಲಾದ ಇಂದ್ರಿಯಗಳಿಂದ, **ವಗ್ನುಂ**=ರೂಪಾದಿ ವಿಷಯಗಳಲ್ಲಿ **ಉಪಜಿಘ್ನಮಾನಃ**= ಅಧರ್ಮಕ್ಕೆ ಕಾರಣವಾದ ಯಾವ ಪಾಪವನ್ನು ಮಾಡಿದ್ದೇನೋ, **ತಾನಿ ಋಣಾನಿ**= ಆ ಪಾಪರೂಪವಾದ ಋಣಗಳನ್ನು, **ಉಗ್ರಂಪಶ್ಯಾ ಚ ರಾಷ್ಟ್ರಭೃತ್ ಚ**

**ಅಪ್ಸರಸೌ**=ಉಗ್ರಂಪಶ್ಯಾ ಮತ್ತು ರಾಷ್ಟ್ರಭೃತ್ ಎಂಬ ಹೆಸರುಳ್ಳ ಅಪ್ಸರೆಯರು, **ಅನುದತ್ತಾಂ**=ಅನುಕೂಲವಾಗಿ ಪ್ರತ್ಯರ್ಪಿಸಲಿ, ಪಾಪರೂಪವಾದ ಋಣವು ನಮಗೆ ಬರದಂತೆ ಅನುಗ್ರಹಿಸಲಿ.

ಕೈಗಳಿಂದ ದ್ರವ್ಯಗಳನ್ನು ಅಪಹರಿಸುವುದು ಮೊದಲಾದ ಪಾಪಗಳನ್ನು ನಾನು ಮಾಡಿದ್ದರೆ, ಹಾಗೂ ಕಣ್ಣು ಮೊದಲಾದ ಇಂದ್ರಿಯಗಳು ರೂಪವೇ ಮೊದಲಾದ ವಿಷಯದಲ್ಲಿ ಬಿದ್ದು, ಅಧರ್ಮಕ್ಕೆ ಕಾರಣವಾದ ಪಾಪವನ್ನು ಮಾಡಿದ್ದರೆ, ಆ ಪಾಪರೂಪವಾದ ಋಣವನ್ನು ಉಗ್ರಂಪಶ್ಯಾ ಮತ್ತು ರಾಷ್ಟ್ರಭೃತ್ ಎಂಬ ದೇವತಾಸ್ತ್ರೀಯರು ಹೋಗಲಾಡಿಸಲಿ. ನಮಗೆ ಪಾಪರೂಪವಾದ ಋಣವು ಉಂಟಾಗದಂತೆ ಅನುಗ್ರಹಿಸಲಿ.

**24. ಉಗ್ರಂಪಶ್ಯೇ ರಾಷ್ಟ್ರಭೃತ್ಕಿಲ್ಬಿಷಾಣಿ ಯದಕ್ಷವೃತ್ತಮನುದತ್ತ ಮೇತತ್ । ನೇನ್ನ ಋಣಾನೃಣವ ಇತ್ಸಮಾನೋ ಯಮಸ್ಯ ಲೋಕೇ ಅಧಿರಜ್ಜುರಾಯ ॥**

**ಉಗ್ರಂಪಶ್ಯೇ ರಾಷ್ಟ್ರಭೃತ್**=ಎಲೈ ಉಗ್ರಂಪಶ್ಯಾ ಮತ್ತು ರಾಷ್ಟ್ರಭೃತ್ ಎಂಬ ಹೆಸರಿನ ದೇವತಾ ಸ್ತ್ರೀಯರೇ!, **ಕಿಲ್ಬಿಷಾಣಿ**=ಋಣ(ಸಾಲ)ರೂಪವಾದ, ಯಾವ ಪಾಪವೂ ನಮ್ಮಿಂದ ಮಾಡಲ್ಪಟ್ಟಿದೆಯೋ, **ಯದಕ್ಷವೃತ್ತಂ**=ಪಗಡೆಯಾಟ ಮೊದಲಾದ ಜೂಜಿನಲ್ಲಿ ಕೊಡಬೇಕಾದ ಪಣರೂಪವಾದ ಧನವನ್ನು ಪ್ರತ್ಯರ್ಪಿಸ-ಲಿಲ್ಲ. **ಏತತ್ ಅನುದತ್ತಂ**=ಈ ಎಲ್ಲಾ ಸಾಲವನ್ನೂ ನನ್ನ ಪರವಾಗಿ, ನನಗೆ ಅನುಕೂಲರಾದ ನೀವೇ ಕೊಡುವವರಾಗಿದ್ದೀರಿ. **ಋಣಾನ್**=ಋಣಯುಕ್ತರಾದ, **ಅಸ್ಮಾನ್**=ನಮ್ಮನ್ನು, **ಸಮಾನಃ**=ನಮಗೆ ಸರಿಸಮಾನನಾಗಿದ್ದ, ಆ ಸಾಲ ಕೊಟ್ಟವನು, **ಅದಿರಜ್ಜುಃ**=ಕಟ್ಟಿಹಾಕಲು ಸಾಕಷ್ಟು ಉದ್ದದ ಹಗ್ಗ ಉಳ್ಳವನಾಗಿ, **ಯಮಸ್ಯ ಲೋಕೆ**=ಮರಣಾನಂತರದಲ್ಲಿ ಹೋಗುವ ಯಮನ ಪಟ್ಟಣದಲ್ಲಿ (ನರಕದಲ್ಲಿ) **ಆಯ**=ನಮ್ಮನ್ನು ತೆಗೆದುಕೊಂಡು ಹೋಗಿ, **ನೇನ್ನೃಣವಃ**=ಋಣ ನಿಮಿತ್ತವಾಗಿ ಬಂದಿಸುವನು.

ಉಗ್ರಂಪಶ್ಯಾ ಮತ್ತು ರಾಷ್ಟ್ರಭೃತ್ ಎಂಬ ದೇವತಾಸ್ತ್ರೀಯರೇ!, ನಾನು ಸಾಲವನ್ನು ತೆಗೆದುಕೊಂಡು ಅದನ್ನು ಪ್ರತಿಯಾಗಿ ಹಿಂದಿರುಗಿಸದೇ ಇದ್ದರೆ ಹಾಗೂ ಪಗಡೆ ಮೊದಲಾದ ಜೂಜಿನಲ್ಲಿ ಕೊಡಬೇಕಾದ ಪಣರೂಪವಾದ ಹಣವನ್ನು ಕೊಡದೆ ಇದ್ದು, ಅದು ಪಾಪಜನಕವಾಗಿರುವುದರಿಂದ ನನ್ನ ಬಗ್ಗೆ ಕರುಣೆಯುಳ್ಳ

ನೀವೇ ಆ ಸಾಲದ ಹಣವನ್ನು ಕೊಡುವವರಾಗಿದ್ದೀರಿ. ಆ ಋಣವನ್ನು ತೀರಿಸದಿದ್ದರೆ, ಮರಣಾನಂತರದಲ್ಲಿ ಹೋಗುವ ಯಮನ ಪಟ್ಟಣದಲ್ಲಿ ಆ ಸಾಲ ಕೊಟ್ಟವರು ನಮ್ಮನ್ನು ಬಲವಾದ ಹಗ್ಗದಿಂದ ಕಟ್ಟಿಹಾಕುವರು. ಹಾಗಾಗಿ ಋಣರೂಪವಾದ ಪಾಪದಿಂದ ನಮ್ಮನ್ನು ಮುಕ್ತಿಗೊಳಿಸಿ ಅನುಗ್ರಹಿಸಿ.

**25. ಅವತ್ತೇ ಹೇಳೋ ವರುಣ ನಮೋಭಿರವ ಯಜ್ಞೇ ಭಿರೀಮಹೇ ಹವಿರ್ಭಿಃ ।**
**ಕ್ಷಯನ್ನಸ್ಮಭ್ಯಮಸುರ ಪ್ರಚೇತೋ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ॥**

**ವರುಣ**=ಎಲೈ ವರುಣ ದೇವನೇ! **ತೇ ಹೇಡಃ**=ನಿನ್ನ ಕೋಪವನ್ನು, **ನಮೋಭಿಃ** =ನಮಸ್ಕಾರಗಳಿಂದ, **ಯಜ್ಞೇಭಿಃ**=ಪೂಜೆಗಳಿಂದ ಮತ್ತು ಯಜ್ಞಾನುಷ್ಠಾನದ ಮೂಲಕ ಪುರೋಡಾಶಾದಿ ಹವಿಸ್ಸುಗಳನ್ನು ಸಮರ್ಪಣೆ ಮಾಡುವುದರಿಂದ, **ಅವೇಮಹೇ**=ಶಾಂತಿಗೊಳಿಸುತ್ತೇವೆ. **ಅಸುರಕ್ಷಯ**=ಶತ್ರುಗಳಾದ ರಾಕ್ಷಸರನ್ನು ನಾಶಗೊಳಿಸಲು ಸಮರ್ಥನಾದ, **ಪ್ರಚೇತಃ ರಾಜನ್**=ವಿಶಾಲವಾದ ಮನಸ್ಸುಳ್ಳ ತೇಜಸ್ವಿಯಾದ ನೀನು, **ಅಸ್ಮಭ್ಯಂ**=ನಮ್ಮ ಅನುಗ್ರಹಕ್ಕೋಸ್ಕರವಾಗಿ, **ಕ್ಷಯನ್**=ಇಲ್ಲಿ ನೆಲೆಸಿದ್ದು, **ಕೃತಾನಿ ಏನಾಂಸಿ**=ನಮ್ಮಿಂದ ಮಾಡಲ್ಪಟ್ಟ ಪಾಪಗಳನ್ನು, **ಶಿಶ್ರಥ**= ನಾಶಗೊಳಿಸು.

ವರುಣದೇವನೇ! ನಮಸ್ಕಾರಗಳಿಂದ, ಪೂಜೆಗಳಿಂದ ಮತ್ತು ಯಜ್ಞಾನುಷ್ಠಾನ-ಗಳನ್ನು ಮಾಡಿ, ಪವಿತ್ರವಾದ ಹವಿಸ್ಸನ್ನು ನಿನಗೆ ಸಮರ್ಪಿಸುವುದರ ಮೂಲಕ-ವಾಗಿ, ನಿನ್ನ ಕೋಪವನ್ನು ಶಾಂತಗೊಳಿಸುತ್ತೇವೆ. ಶತ್ರುಗಳಾದ ರಾಕ್ಷಸರನ್ನು ನಾಶಮಾಡುವ ಸಾಮರ್ಥ್ಯ ಹೊಂದಿದ, ವಿಶಾಲ ಹೃದಯವುಳ್ಳ ತೇಜಸ್ವಿಯಾದ ನೀನು ನಮ್ಮ ಅನುಗ್ರಹಕ್ಕಾಗಿ ಇಲ್ಲಿ ನೆಲೆಸಿದ್ದು ನಮ್ಮಿಂದ ಮಾಡಲ್ಪಟ್ಟ ಪಾಪ-ಗಳನ್ನೆಲ್ಲ ನಾಶ ಮಾಡಿ ನಮ್ಮನ್ನು ಮುಕ್ತನನ್ನಾಗಿಸು.

**26. ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ ।**
**ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥**

**ವರುಣ**=ವರುಣದೇವನೇ! **ಅಸ್ಮತ್**=ನಮ್ಮ **ಉತ್ತಮಂ**=ತಲೆಯಲ್ಲಿ ಧರಿಸಿದ, **ಪಾಶಂ**=ನಿನ್ನ ಪಾಶ(ಹಗ್ಗ)ವನ್ನು ಎಳೆದು ನಾಶ ಮಾಡು. **ಅಧಮಂ**=ಕಾಲಿನಲ್ಲಿ (ಕಾಲಿನ ಪ್ರದೇಶದಲ್ಲಿ) ಸ್ಥಾಪಿತವಾದ ನಿನ್ನ, **ಪಾಶ**=ಹಗ್ಗವನ್ನು ಮತ್ತು **ಮಧ್ಯಮಂ**= ನನ್ನ ಶರೀರದ ಮಧ್ಯಭಾಗದಲ್ಲಿ, ಸ್ಥಾಪಿತವಾದ, ನಿನ್ನ ಪಾಶವನ್ನು ನಾಶಪಡಿಸು.

**ಅರ್ಥ**=ಹೇಗೆ ಮೂರು ರೀತಿಯ (ಮೂರು ಕಡೆ ನನ್ನ ಶರೀರದಲ್ಲಿ), ನಿನ್ನ ಪಾಶದ ವಿನಾಶದ ನಂತರ, **ಆದಿತ್ಯ**=ಸೂರ್ಯನಂತೆ ತೇಜಸ್ವಿಯಾದ, ವರುಣ! **ವಯಮ-ನಾಗಸಃ**=ನಾವು ಪಾಪರಹಿತವಾಗಿ, **ತವವ್ರತೇ**=ನಮ್ಮ ವಿಹಿತವಾದ ಕರ್ತವ್ಯದಲ್ಲಿ (ನಿನ್ನ ಸೇವೆಯಲ್ಲಿ) **ಅದಿತಯೇ ಸ್ಯಾಮ**=ಪರಿಪೂರ್ಣವಾಗಿ ಯೋಗ್ಯರಾಗುವೆವು.

ವರುಣದೇವನೇ! ಪಾಪಿಗಳನ್ನು ಶಿಕ್ಷಿಸುವ ನೀನು, ನಿನ್ನ ಬಂಧನದ ಹಗ್ಗವನ್ನು ನನ್ನ ತಲೆಯಲ್ಲಿ ಶರೀರದ ಮಧ್ಯಭಾಗದಲ್ಲಿ, ಹಾಗೂ ಕಾಲುಗಳಲ್ಲಿ ಹೀಗೆ ಮೂರು ಭಾಗಗಳಲ್ಲಿ ಇರಿಸಿದ್ದೀಯೆ. ಈ ಮೂರೂ ಹಗ್ಗಗಳ ಬಂಧನಗಳನ್ನು ನಾಶ ಮಾಡಿ ನನ್ನನ್ನು ಪಾಪ ನಿರ್ಮುಕ್ತನನ್ನಾಗಿಸು. ಸೂರ್ಯನಂತೆ ತೇಜಸ್ವಿಯಾದ ನಿನ್ನ ಅನುಗ್ರಹದಿಂದ ಈ ಎಲ್ಲಾ ವಿಧವಾದ ಪಾಪಗಳೂ ನಾಶವಾಗಲಾಗಿ ನಾವು ನಮ್ಮ ದೈನಂದಿನ ಕರ್ತವ್ಯಗಳಲ್ಲಿ ಯೋಗ್ಯತೆಯನ್ನು ಹೊಂದುತ್ತೇವೆ.

**27. ಇಮಂ ಮೇ ವರುಣ ಶುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ॥**

ಈ ಮಂತ್ರವು ಇಲ್ಲಿಯೇ ಹಿಂದೆ ಹದಿನೇಳನೇ ಮಂತ್ರವಾಗಿದ್ದು ಅಲ್ಲಿ ವ್ಯಾಖ್ಯಾತವಾಗಿದೆ.

**28. ತತ್ತ್ವಾಯಾಮಿ ಬ್ರಹ್ಮಣಾ.....ಆಯುಃ ಪ್ರಮೋಷೀಃ ॥**

ಈ ಮಂತ್ರವೂ ಇಲ್ಲಿಯೇ ಹಿಂದೆ ಹದಿನೆಂಟನೆ ಮಂತ್ರವೇ ಆಗಿರುವುದರಿಂದ ಅಲ್ಲಿಯೇ ವ್ಯಾಖ್ಯಾತವಾಗಿದೆ.

**29. ತ್ವನ್ನೋ ಅಗ್ನೇ......ಪ್ರಮುಮುಗ್ಧ್ಯಸ್ಮತ್ ॥**

ಈ ಮಂತ್ರವೂ ಇಲ್ಲಿಯೇ ಹಿಂದೆ ಹಂತೋಂಬತ್ತನೇ ಮಂತ್ರವಾಗಿರುವುದರಿಂದ ಪೂರ್ವದಲ್ಲಿಯೇ ವ್ಯಾಖ್ಯಾತವಾಗಿದೆ.

**30. ಸ ತ್ವಂ ನೋ ಅಗ್ನೇ.....ಸುಹವೋ ನ ಏಧಿ ॥**

ಈ ಮಂತ್ರವೂ ಇಲ್ಲಿಯೇ ಇಪ್ಪತ್ತನೇ ಮಂತ್ರವಾಗಿದ್ದು ಅಲ್ಲಿಯೇ ವ್ಯಾಖ್ಯಾತವಾಗಿದೆ.

**31. ಸಂಕುಸುಕೋ ವಿಕುಸುಕೋ ನಿರ್ಋಥೋ ಯಶ್ಚ ನಿಸ್ವನಃ ।**
**ತೇಽಸ್ಮದ್ಯಕ್ಷ್ಮಮನಾಗಸೋ ದೂರಾದ್ದೂರಮಚೀಚತಂ ॥**

**ಸಂಕುಸುಕಃ**=ಬೇರೆಯವರ ಬಗ್ಗೆ ಸಂಕ್ಷೇಪವಾಗಿ ಅಪವಾದವನ್ನು ಹೊರಿಸುವವನು (ದೂರುವವನು), **ವಿಕುಸುಕಃ**=ಬೇರೆಯವರ ಬಗ್ಗೆ ವಿಶೇಷವಾಗಿ (ಹೆಚ್ಚಾಗಿ) ದೂರುವವನು, **ನಿರ್ಋಥಃ**=ಕಷ್ಟವನ್ನು ಉಂಟುಮಾಡುವವನು, **ಯಶ್ಚ ನಿಸ್ವನಃ**=ಚಾಡಿ ಹೇಳುವವನು, **ತೇ ಯೇ**=ಅಂತಹ ದುಷ್ಕೃತ್ಯಗಳನ್ನು ನಾವು ಮಾಡಿದ್ದರೆ **ಅಸ್ಮತ್ ಯಕ್ಷ್ಮಂ**=ಅಂತಹ ಕುಕೃತ್ಯಗಳಿಂದ ಉಂಟಾದ ರೋಗ ನಿಮಿತ್ತವಾದ ಪಾಪಗಳನ್ನು **ಅನಾಗಸಃ**=ಪಾಪ ರಹಿತವಾದಂತಹ, ದೇವತೆಗಳು, **ದೂರಾದ್ದೂರಂ**=ತುಂಬಾ ದೂರವಾಗುವಂತೆ, **ಅಚೀಚತಂ**=(ಚಾತಯಂತು), ನಾಶಮಾಡಲಿ.

ನನ್ನಿಂದ ಸಂಕ್ಷೇಪವಾಗಿಯಾಗಲಿ, ಅಥವಾ ವಿಸ್ತಾರವಾಗಿ ಆಗಲಿ, ವಿನಾಕಾರಣ ಬೇರೆಯವರ ಬಗ್ಗೆ ಅಪವಾದವು ಹೊರಿಸಲ್ಪಟ್ಟಿದ್ದರೆ (ದೂರಲ್ಪಟ್ಟಿದ್ದರೆ) ಹಾಗೂ ಬೇರೆಯವರಿಗೆ ಉಪದ್ರವ ಕೊಡಲ್ಪಟ್ಟಿದ್ದರೆ ಅಥವಾ ಚಾಡಿ ಹೇಳುವ ಕೆಲಸವನ್ನು ನಾನು ಮಾಡಿದ್ದರೆ, ಈ ದೃಷ್ಕೃತ್ಯಗಳಿಂದ ರೋಗವನ್ನು ಉಂಟುಮಾಡುವ ಪಾಪವು ಉಂಟಾಗುವುದರಿಂದ ಅಂತಹ ಪಾಪಗಳು ನನ್ನಲ್ಲಿ ಉಂಟಾಗಿದ್ದರೆ, ಪಾಪರಹಿತ-ರಾದ ದೇವತೆಗಳು ಅನುಗ್ರಹಿಸಿ ಈ ಪಾಪಗಳನ್ನು ಪೂರ್ಣವಾಗಿ ನಾಶ ಮಾಡಿ ನನ್ನನ್ನು ಪಾಪಮುಕ್ತನನ್ನಾಗಿಸಲಿ.

**32. ನಿರ್ಯಕ್ಷ್ಮಮಚೀಚತೇ ಕೃತ್ಯಾಂ ನಿರ್ಋತಿಂ ಚ । ತೇನ ಯೋಽಸ್ಮತ್ಸಮೃಚ್ಛಾತೈ ತಮಸ್ಮೈ ಪ್ರಸುವಾಮಸಿ ॥**

**ಯಕ್ಷ್ಮಂ**=ರೋಗಜನಕವಾದ ಪಾಪವನ್ನು **ನಿರಚೀಚತೇ**=ಸಂಪೂರ್ಣವಾಗಿ ನಾಶಮಾಡುವೆನು. **ಕೃತ್ಯಾಂ ನಿರ್ಋತಿಂ ಚ**=ಪಾಪರೋಗಾದಿ ರೂಪವಾದ ಅನಿಷ್ಟವನ್ನು (ದೋಷವನ್ನು) ನಾಶ ಮಾಡುತ್ತೇನೆ. **ಯಃ**=ಯಾವ, ನಮ್ಮ ವೈರಿಯು, **ಅಸ್ಮತ್**=ನಮ್ಮ ಬಗ್ಗೆ, **ತೇನ**=ಕೃತ್ಯಗಳಿಂದ (ಪಾಪಕಾರ್ಯಗಳಿಂದ), **ಸಮೃಚ್ಛಾತೈ**=ವಿನಾಶಕಾರ್ಯವನ್ನು ಎಸಗಿದ್ದರೆ, **ಅಸ್ಮೈ**=ಆ ಶತ್ರುವಿನಲ್ಲಿಗೆ, **ತಂ**=ಆ ರೋಗಜನಕ-ವಾದ ಪಾಪವನ್ನು, **ಪ್ರಸುವಾಮಸಿ**=ಕಳುಹಿಸುವೆನು.

ಪಾಪರಹಿತರಾದ ದೇವತೆಗಳ ಅನುಗ್ರಹದಿಂದ ರೋಗಜನಕವಾದ ಪಾಪ-ವನ್ನು ಸಂಪೂರ್ಣವಾಗಿ ನಾಶ ಮಾಡುವೆನು. ಪಾಪರೋಗಾದಿ ರೂಪವಾದ ಅನಿಷ್ಟವನ್ನು ನಾಶಮಾಡುವೆನು, ನಮ್ಮ ವೈರಿಯು ನಮ್ಮ ಬಗ್ಗೆ ವಾಮಮಾರ್ಗದಿಂದ

ನಮ್ಮ ವಿನಾಶಕ್ಕಾಗಿ ಕಾರ್ಯವನ್ನು ಎಸಗಿದ್ದರೆ ಆ ಶತ್ರುವಿನಲ್ಲಿಗೆ ಈ ನಮ್ಮ ರೋಗಜನಕವಾದ ಪಾಪಗಳನ್ನು ಕಳುಹಿಸುವೆನು.

**33. ದುಃಶ꣡ಸಾನುಶ꣡ಸಾಭ್ಯಾಂ ಘಣೇನಾನು ಘಣೇನ ಚ ।**
**ತೇನಾನ್ಯೋಽಸ್ಮತ್ಸಮೃಚ್ಛಾತೈ ತಮಸ್ಮೈ ಪ್ರಸುವಾಮಸಿ ॥**

**ದುಃಶಂಸಃ**=ನಮ್ಮ ದೋಷವನ್ನು ಎತ್ತಿ ಹೇಳುವವನು, **ಅನುಶಂಸಃ**=ಬೇರೆಯವರ ಎದುರಿನಲ್ಲಿ ನಮ್ಮ ದೋಷಗಳನ್ನು ಹೆಚ್ಚಾಗಿ ಪುನಃ ಪುನಃ ಹೇಳುವವನು, **ಘಣಃ**=ಹಿಂಸೆ ಮಾಡುವ ಸ್ವಭಾವವುಳ್ಳವನು, **ಅನುಘಣಃ**=ಅವನನ್ನು ಪ್ರೋತ್ಸಾಹಿಸುವವನು, **ತೇನ**=ಈ ದುಷ್ಕೃತ್ಯಗಳ ಜೊತೆಗೆ, **ಅನ್ಯಃ**=ಬೇರೆ ಯಾರಾದರೂ ನಮ್ಮ ಶತ್ರುವು **ಅಸ್ಮತ್ಸಮೃಚ್ಛಾತೈ**=ನಮ್ಮ ಬಗ್ಗೆ ವಿನಾಶಕಾರ್ಯವನ್ನು ಉಂಟುಮಾಡಿದ್ದರೆ, **ಅಸ್ಮೈ**=ಆ ವಿನಾಶಕನಾದ ಶತ್ರುವಿಗೆ, **ತಂ**=ಈ ರೋಗಜನಕವಾದ ನಮ್ಮ ಪಾಪವನ್ನು, **ಪ್ರಸುವಾಮಸಿ**=ಕಳುಹಿಸುವೆವು.

ನಮ್ಮ ತಪ್ಪುಗಳನ್ನು (ದೋಷಗಳನ್ನು) ಎತ್ತಿ ಹೇಳುವವನು. ಹಾಗೂ ಬೇರೆಯವರ ಎದುರಿನಲ್ಲಿ ಉದ್ದೇಶಪೂರ್ವಕವಾಗಿ ನಮ್ಮ ದೋಷಗಳ ಬಗ್ಗೆ ವಿಶೇಷವಾಗಿ ಹೇಳುವವನು, ಹಾಗೂ ಹಿಂಸಕನು ಮತ್ತು ಹಿಂಸೆ ಮಾಡುವುದನ್ನು ಪ್ರೋತ್ಸಾಹಿಸುವವನು, ಹಾಗೂ ಇವುಗಳ ಜೊತೆಗೆ ಬೇರೆ ಯಾರಾದರೂ ನಮ್ಮ ಶತ್ರುಗಳು ನಮ್ಮ ವಿನಾಶಕ್ಕೋಸ್ಕರವಾಗಿ ಪಾಪಕಾರ್ಯವನ್ನು ಎಸಗಿದ್ದರೆ, ಆ ವಿನಾಶಕನಾದ ನಮ್ಮ ಶತ್ರುವಿನ ಬಳಿಗೆ ಈ ರೋಗಜನಕವಾದ ನಮ್ಮ ಪಾಪವನ್ನು ಕಳುಹಿಸುವೆವು. ಪಾಪರಹಿತರಾದ ದೇವತೆಗಳು ಅದನ್ನು ಅನುಗ್ರಹಿಸಲಿ.

**34. ಸಂ ವರ್ಚಸಾ ಪಯಸಾ ಸಂ ತನೂಭಿರಗನ್ಮಹಿ ಮನಸಾ ಸ꣡ ಶಿವೇನ । ತ್ವಷ್ಟಾ ನೋ ಅತ್ರ ವಿದಧಾತು ರಾಯೋಽನುಮಾರ್ಷ್ಟು ತನ್ವೋ꣡ ಯದ್ವಿಲಿಷ್ಟಮ್ ॥**

ಈ ಕೂಶ್ಮಾಂಡ ಹೋಮದ ಅನುಷ್ಠಾನದಿಂದ ಪಾಪಗಳಿಂದ ಶೋಧಿಸಲ್ಪಟ್ಟು ಪರಿಶುದ್ಧರಾಗಿ, ನಾವು **ವರ್ಚಸಾ**=ಬಲದಿಂದ, **ಸಂಪಯಸಾ**=ಕ್ಷೀರ ಮೊದಲಾದವುಗಳಿಂದ, **ಸಂತನೂಭಿಃ ಮನಸಾಚ ಶಿವೇನ**=ಶುದ್ಧವಾದ ಶರೀರ ಮತ್ತು ಮನಸ್ಸುಗಳಿಂದ, **ಸಮಗನ್ಮಹಿ**=ಕೂಡಿದವರಾಗಿದ್ದೇವೆ, **ಅತ್ರ**=ಈ ಕೂಶ್ಮಾಂಡ ಹೋಮದಲ್ಲಿ, **ತ್ವಷ್ಟಾ**=ತ್ವಷ್ಟ್ರುದೇವನು, **ನಃ**=ನಮಗೆ, **ರಾಯಃ**=ಸಂಪತ್ತುಗಳನ್ನು, **ವಿದಧಾತು**=ಉಂಟುಮಾಡಲಿ, **ಯಚ್ಚವಿಲಿಷ್ಟಂ ತನ್ವಃ**=ನಮ್ಮ ಶರೀರದಲ್ಲಿ ಇನ್ನೂ ಬೇರೆ

ಯಾವುದಾದರೂ ಪಾಪಲೇಶವಿದ್ದರೆ ಅವುಗಳನ್ನೂ ಸಹ, ತ್ವಷ್ಟೃದೇವನು ಪರಿಹರಿಸಲಿ.

ಈ ಪಾಪನಾಶಕವಾದ ಕೂಶ್ಮಾಂಡ ಹೋಮದ ಅನುಷ್ಠಾನದಿಂದ ಪಾಪ-ಗಳನ್ನೆಲ್ಲಾ ಪರಿಹರಿಸಿಕೊಂಡವನಾಗಿ, ಪರಿಶುದ್ಧರಾದ ನಾವು ಕ್ಷೀರಾದಿಗಳಿಂದ ಬಲವನ್ನು ಹೊಂದಿದವರಾಗಿ, ಸುಂದರವಾದ ಶರೀರವನ್ನು ಮತ್ತು ಪರಿಶುದ್ಧವಾದ ಮನಸ್ಸನ್ನು ಹೊಂದಿದವರಾಗಿದ್ದೇವೆ. ಈ ಕೂಶ್ಮಾಂಡ ಹೋಮದಿಂದ ಸಂತುಷ್ಟ-ಗೊಂಡ ತ್ವಷ್ಟೃದೇವನು ನಮಗೆ ಸಂಪತ್ತನ್ನು ಅನುಗ್ರಹಿಸಲಿ, ಮತ್ತು ನಮ್ಮ ಶರೀರದಲ್ಲಿ ಇನ್ನಾವುದಾದರೂ ಪಾಪಲೇಶಗಳು ಉಳಿದಿದ್ದರೆ ಅವುಗಳನ್ನೂ ಪರಿಹರಿಸಿ ನಮ್ಮನ್ನು ಅನುಗ್ರಹಿಸಲಿ.

**35. ಆಯುಷ್ಟೇ ವಿಶ್ವತೋ ದಧದಯಮಗ್ನಿರ್ವರೇಣ್ಯಃ । ಪುನಸ್ತೇ ಪ್ರಾಣ ಆಯಾತಿ ಪರಾಯಕ್ಷ್ಮꣳ ಸುವಾಮಿ ತೇ ॥**

**ತೇ**=ಎಲೈ ಯಜಮಾನನೇ! ನಿನಗೆ, **ವರೇಣ್ಯಃ ಅಯಂ ಅಗ್ನಿಃ**=ಶ್ರೇಷ್ಠನಾದ ಈ ಅಗ್ನಿದೇವನು, **ವಿಶ್ವತಃ ಆಯುಃ ದಧತ್**=ಪೂರ್ಣಾಯುಷ್ಯವನ್ನು ಅನುಗ್ರಹಿಸಲಿ, **ತೇ ಪ್ರಾಣಃ**=ಅಪಮೃತ್ಯುವಿನಿಂದ ಹಿಡಿಯಲ್ಪಟ್ಟಿದ್ದರೂ ಸಹ ನಿನ್ನ ಪ್ರಾಣವು, **ಪುನಃ ಆಯಾತಿ**=ಅಗ್ನಿದೇವನ ಅನುಗ್ರಹದಿಂದ ಪುನಃ ನಿನ್ನ ಶರೀರದಲ್ಲಿ ಬಂದುಸೇರಲಿ. **ತೇ ಯಕ್ಷ್ಮಂ**=ನಿನ್ನ ರೋಗಗಳನ್ನು **ಪರಾಸುವಾಮಿ**=ನಾಶ ಮಾಡುವೆನು.

ಕೂಶ್ಮಾಂಡ ಹೋಮವನ್ನು ಅನುಷ್ಠಾನ ಮಾಡುತ್ತಿರುವ ಯಜಮಾನನೇ! ಅಗ್ನಿದೇವನು ನಿನಗೆ ಪೂರ್ಣ ಆಯುಷ್ಯವನ್ನು ದಯಪಾಲಿಸಲಿ. ಹಾಗೂ ನಿನ್ನ ಪ್ರಾಣವು ಅಪಮೃತ್ಯುವಿನಿಂದ ಕಬಳಿಸಲ್ಪಟ್ಟಿದ್ದರೂ ಸಹ ಅವನ ಅನುಗ್ರಹದಿಂದ, ಪುನಃ ನಿನ್ನ ಶರೀರದಲ್ಲಿ ಬಂದು ಸೇರುವುದು. ಹಾಗೂ ಅವನ ಅನುಗ್ರಹ-ದಿಂದಲೇ ನಿನ್ನ ಶರೀರದಲ್ಲಿರುವ ರೋಗಗಳೆಲ್ಲವೂ ನಾಶವಾಗುವವು, ಅಥವಾ ಅಗ್ನಿದೇವನ ಅನುಗ್ರಹದಿಂದ ರೋಗಗಳು ನಾಶ ಹೊಂದಲಿ.

**36. ಆಯುರ್ದಾ ಅಗ್ನೇ ಹವಿಷೋ ಜುಷಾಣೋ ಘೃತಪ್ರತೀಕೋ ಘೃತಯೋನಿರೇಧಿ । ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಮಭಿ-ರಕ್ಷತಾದಿವಮ್ ॥**

**ಅಗ್ನೇ**=ಅಗ್ನಿದೇವನೇ! ನೀನು, **ಆಯುರ್ದಾ ಏಧಿ**=ಯಜಮಾನನಿಗೆ ಆಯುಷ್ಯ-ವನ್ನು ವರ್ಧಿಸುವವನಾಗು, **ಹವಿಷೋ ಜುಷಾಣ**=ಆಜ್ಯವನ್ನು ಸೇವಿಸುವವನಾಗಿ,

**ಘೃತ ಪ್ರತೀಕಃ**=ಹೋಮಾರಂಭದಲ್ಲಿ ಮೊದಲಿನ ಆಘಾರಾದಿ (ಆಜ್ಯಭಾಗವೂ ಸೇರಿ) ಆಜ್ಯದ ಆಹುತಿಯನ್ನು ಸ್ವೀಕರಿಸುವ ಮೂಲಕ, ಹೋಮಾದಿಗಳಿಗೆ ಮೊದಲಿಗ-ನಾಗಿದ್ದೀಯೆ. **ಘೃತಯೋನಿಃ**=ಹೋಮದಲ್ಲಿ ಜ್ವಾಲೋತ್ಪತ್ತಿಗೆ ಕಾರಣನೂ ಆಗಿದ್ದೀಯೆ. **ಮಧು**=ಸ್ವಾದಿಷ್ಟವಾದ, **ಚಾರು**=ಸಂಸ್ಕರಿಸಲ್ಪಟ್ಟದ್ದರಿಂದ ಪರಿಶುದ್ಧ-ವಾದ, **ಗವ್ಯಂ**=ಗೋವಿನ ತುಪ್ಪವನ್ನು, **ಪೀತ್ವಾ**=ಸ್ವೀಕರಿಸಿ, **ಪಿತಾ ಪುತ್ರಮಿವ ಇಮಂ ಅಭಿರಕ್ಷತಾತ್**=ತಂದೆಯು ಮಗನನ್ನು ರಕ್ಷಿಸುವಂತೆ, ಈ ಯಜಮಾನನನ್ನು ನೀನು ರಕ್ಷಿಸು.

ಅಗ್ನಿದೇವನೇ! ನೀನು ಈ ಯಜಮಾನನಿಗೆ ಪೂರ್ಣಾಯುಷ್ಯವನ್ನು ನೀಡಿ, ಅವನನ್ನು ವರ್ಧಿಸು. ಹೋಮಗಳ ಆರಂಭದಲ್ಲಿ ನೀನು ಮೊಟ್ಟಮೊದಲಿನ ಆಹುತಿಭಾಗಿಯಾಗಿರುವುದರಿಂದ, ಯಜ್ಞಗಳಿಗೆ ಮೊದಲಿಗನಾಗಿದ್ದೀಯೆ. ಹಾಗೂ ಯಜ್ಞಗಳಲ್ಲಿ ಆಹುತಿ ಸಮರ್ಪಣೆಗೆ ಅನುಕೂಲವಾಗುವ ಜ್ವಾಲೆಯ ಉತ್ಪತ್ತಿಗೂ ಕಾರಣನಾಗಿದ್ದೀಯೆ. ಸ್ವಾದಿಷ್ಟವಾದ ಹಾಗೂ (ಮಧುರವಾದ) ಸಂಸ್ಕಾರ-ಗೊಳಿಸಿದ್ದರಿಂದ ಅತ್ಯಂತ ಪರಿಶುದ್ಧವಾದ ಗೋವಿನ ತುಪ್ಪ (ಆಜ್ಯ)ವನ್ನು ಹೋಮದಲ್ಲಿ ಸ್ವೀಕರಿಸಿ, ತಂದೆಯು ಮಗನನ್ನು ರಕ್ಷಿಸುವಂತೆ, ನೀನು ಈ ಯಜಮಾನನನ್ನು ಪರಿಪೂರ್ಣವಾಗಿ ರಕ್ಷಿಸುವವನಾಗು.

**37. ಇಮಮಗ್ನ ಆಯುಷೇ ವರ್ಚಸೇ ಕೃಧಿ ತಿಗ್ಮ ಮೋಜೋ ವರುಣ ಸಂ ಶಿಶಾಧಿ ।**
**ಮಾತೇವಾಸ್ಮಾ ಅದಿತೇ ಶರ್ಮ ಯಚ್ಛ ವಿಶ್ವೇದೇವಾ ಜರದಷ್ಟಿರ್ಯಥಾ ಸತ್ ॥**

**ಅಗ್ನೇ**=ಅಗ್ನಿದೇವನೇ! **ಇಮಂ**=ಈ ಯಜಮಾನನನ್ನು, **ಆಯುಷೇ ವರ್ಚಸೇ ಕೃಧಿ**=ದೀರ್ಘಾಯುಷ್ಯಕ್ಕೂ, ಬಲಕ್ಕೂ (ಶಕ್ತಿ) ಸಮರ್ಥನನ್ನಾಗಿ, ಮಾಡು, **ವರುಣ**=ಎಲೈ ವರುಣದೇವನೇ! **ತಿಗ್ಮಂ**=ತೀಕ್ಷ್ಣವಾದ (ಪ್ರಬಲವಾದ) **ಓಜಃ**=ಶಕ್ತಿಯನ್ನು, **ಸಂಶಿಶಾಧಿ**=ಪುನಃ ಬಲಪಡಿಸು (ಸ್ಥಾಪಿಸು), **ಅದಿತೇ**=ಪೃಥಿವೀ ಮಾತೆಯೇ! **ಮಾತೇವ**=ತಾಯಿಯಂತೆ, **ಅಸ್ಮೈ ಶರ್ಮಯಚ್ಛ**=ಇವನಿಗೆ ಸುಖವನ್ನು ಕರುಣಿಸು, **ವಿಶ್ವೇದೇವಾಃ**=ವಿಶ್ವೇದೇವ ದೇವತೆಗಳೇ! **ಜರದಷ್ಟಿಃ ಯಥಾಽಸತ್** =ಈ ಯಜಮಾನನು ಬಾಲ್ಯ ಹಾಗು ಯೌವನದಲ್ಲಿ ಮರಣವಿಲ್ಲದವನಾಗಿ ಪೂರ್ಣಾಯುಷ್ಯವನ್ನು ಹೊಂದಿದವನಾಗಲಿ.

ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಈ ಯಜಮಾನನು ಉತ್ತಮವಾದ ಶಕ್ತಿಶಾಲಿಯಾದವನೂ ಹಾಗೂ ದೀರ್ಘಾಯುಷ್ಯವುಳ್ಳವನೂ ಆಗಲಿ, ವರುಣ-ದೇವನು, ಪ್ರಕೃಷ್ಟವಾದ ಶಕ್ತಿಯನ್ನು ಉಂಟುಮಾಡಲಿ, ಪೃಥಿವೀಮಾತೆಯು

ತಾಯಿಯು ಮಗನನ್ನು ವಾತ್ಸಲ್ಯದಿಂದ ಪೋಷಿಸುವಂತೆ ಈ ಯಜಮಾನನ ಸುಖ ಹಾಗೂ ಸಂತೋಷವನ್ನು ಅನುಗ್ರಹಿಸಲಿ. ವಿಶ್ವೇದೇವ ದೇವತೆಗಳ ಅನುಗ್ರಹ-ದಿಂದ ಈತನು ಬಾಲ್ಯ ಹಾಗೂ ಯೌವನಗಳಲ್ಲಿ ಮೃತ್ಯುವಿಗೆ ತುತ್ತಾಗದೆ, ಪರಿಪೂರ್ಣವಾದ ಆಯುಷ್ಯವನ್ನು ಹೊಂದಿದವನಾಗಲಿ.

**38. ಅಗ್ನ ಆಯೂಳಂಷಿ ಪವಸ್ವ ಆಸುವೋರ್ಜಮಿಷಂ ಚ ನಃ । ಆರೇ ಬಾಧಸ್ವ ದುಚ್ಛುನಾಮ್ ॥**

**ಅಗ್ನೇ**=ಅಗ್ನಿದೇವನೇ! **ಆಯೂಂಷಿ**=ನಮ್ಮ ಜೀವನವನ್ನು, **ಪವಸೇ**=ಸಮೃದ್ಧಿ ಹೊಂದುವಂತೆ ಪರಿಷ್ಕರಿಸು, **ಊರ್ಜಂ**=ಹಾಲು ಮೊದಲಾದ ರಸರೂಪ ಭೋಗ್ಯ ವಸ್ತುವನ್ನು, **ಇಷಂ ಚ**=ಮತ್ತು ಅನ್ನವನ್ನೂ, **ನಃ**=ನಮಗೆ, **ಆಸುವ**=ಹೆಚ್ಚಾಗಿ ಒದಗುವಂತೆ ಅನುಗ್ರಹಿಸು, **ದುಚ್ಛುನಾಂ**=ಕಷ್ಟಗಳನ್ನು, **ಆರೇ ಬಾಧಸ್ವ**=ದೂರವಾಗುವಂತೆ ನಾಶಪಡಿಸು.

ಅಗ್ನಿದೇವನ ಪೂರ್ಣಾನುಗ್ರಹದಿಂದ ನಮ್ಮ ಜೀವನವು ಸಮೃದ್ಧಿಯಾಗಲಿ, ಹಾಲು ಮೊದಲಾದ ರಸರೂಪವಾದ ಭೋಜ್ಯವಸ್ತುಗಳು, ಹಾಗೂ ಅನ್ನವೂ ನಮಗೆ ವಿಪುಲವಾಗಿ ಒದಗುವಂತೆ ಆಗಲಿ. ಹಾಗೂ ನಮ್ಮ ಕಷ್ಟಕಾರ್ಪಣ್ಯಗಳನ್ನು ಸಂಪೂರ್ಣವಾಗಿ ನಾಶಮಾಡಿ ನಮ್ಮನ್ನು ಅಗ್ನಿದೇವನು ಅನುಗ್ರಹಿಸಲಿ.

**39. ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಂ । ದಧದ್ರಯಿಂ ಮಯಿ ಪೋಷಮ್ ॥**

**ಸ್ವಪಾಃ ಅಗ್ನೇ**=ಮಂಗಲಕರವಾದ ತಪಸ್ಸನ್ನೇ ಅನುಷ್ಠಾನ ಮಾಡುವ ಅಗ್ನಿದೇವನೇ! **ಅಸ್ಮೇ**=ನಮಗೆ, **ವರ್ಚಃ**=ಬ್ರಹ್ಮವರ್ಚಸ್ಸನ್ನು ಮತ್ತು **ಸುವೀರ್ಯಂ**=ಒಳ್ಳೆಯ ಸಾಮರ್ಥ್ಯವನ್ನು, **ಪವಸ್ವ**=ಅನುಗ್ರಹಿಸು, (ನಮ್ಮನ್ನು ಪರಿಶೋಧಿಸು-ವುದರ ಮೂಲಕ ಉಂಟುಮಾಡು) **ರಯಿಂ**=ಸಂಪತ್ತನ್ನೂ, **ಪೋಷಂ**=ಪುಷ್ಟಿ-ಯನ್ನೂ, **ಮಯಿ**=ನನ್ನಲ್ಲಿ, **ದಧತ್**=ಉಂಟುಮಾಡು.

ಸದಾಕಾಲ ಒಳ್ಳೆಯ ತಪಸ್ಸನ್ನೇ ಆಚರಿಸುವ ಅಗ್ನಿದೇವನು ನಮಗೆ ಬ್ರಹ್ಮವರ್ಚಸ್ಸನ್ನೂ, ಹಾಗೂ ಉತ್ತಮವಾದ ಶರೀರ ಸಾಮರ್ಥ್ಯವನ್ನೂ ಅನುಗ್ರಹಿಸಲಿ. ನಮ್ಮ ಪಾಪಶೇಷಗಳನ್ನು ಸಂಪೂರ್ಣವಾಗಿ ವಿನಾಶಮಾಡಿ ಸಂಪತ್ತನ್ನೂ ಪುಷ್ಟಿಯನ್ನೂ ಸಹ ಅಗ್ನಿದೇವನು ನಮಗೆ ಅನುಗ್ರಹಿಸಲಿ.

**40. ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ । ತಮೀಮಹೇ ಮಹಾಗಯಮ್ ॥**

**ಅಗ್ನಿಃ**=ಅಗ್ನಿದೇವನು, **ಋಷಿಃ**=ಅತೀಂದ್ರಿಯ ಜ್ಞಾನವುಳ್ಳವನು, **ಪವಮಾನಃ**=ಪಾಪಗಳನ್ನು ಪರಿಶುದ್ಧಗೊಳಿಸುವ ಸಾಮರ್ಥ್ಯವುಳ್ಳವನು, **ಪಾಂಚಜನ್ಯಃ**=ನಿಷಾದ ಪರ್ಯಂತವಿರುವ ಐದು ವರ್ಣಗಳಲ್ಲಿ ಜನಿಸಿದವನು, **ಪುರೋಹಿತಃ**=ಎಲ್ಲಾ ಯಾಗಾದಿ ವೈದಿಕ ಕಾರ್ಯಗಳಲ್ಲಿ ಮೊದಲಿಗಿರುವವನು, **ಮಹಾಗಯಂ**=ಈ ಎಲ್ಲಾ ರೀತಿಯ ಗುಣ ವಿಶೇಷಗಳಿಂದ ಕೂಡಿದ ''ಅಗ್ನಿ'' ಎಂಬ ದೊಡ್ಡದಾದ ಆಶ್ರಯ(ಮನೆ)ವನ್ನು ನಾವು ತಮೀಮಹೇ=ಹೊಂದುವೆವು.

ಅಗ್ನಿದೇವನು ಸ್ವತಃ ಅತೀಂದ್ರಿಯ ಜ್ಞಾನಿಯಾಗಿದ್ದು ಪಾಪಗಳನ್ನು ನಾಶಪಡಿಸಿ, ಜೀವಿಗಳನ್ನು (ಜೀವರನ್ನು) ಶೋಧಿಸುವ ಸಾಮರ್ಥ್ಯವನ್ನೂ ಹೊಂದಿದವನಾಗಿದ್ದಾನೆ, ಹಾಗೂ ನಿಷಾದ ಪರ್ಯಂತವಾಗಿ ಗಣಿಸಿ, ಐದು ವರ್ಣಗಳಲ್ಲಿ ಜನ್ಮ ಪಡೆದಿದ್ದು, ಯಜ್ಞಾದಿ ವೈದಿಕ ಕರ್ಮಗಳಲ್ಲಿ ಆದ್ಯ ಪೂಜ್ಯನು ಅಥವಾ ಮಂಚೂಣಿಯಲ್ಲಿದ್ದವನಾಗಿದ್ದಾನೆ. ಇಂತಹ ಗುಣ ವಿಶೇಷಗಳಿಂದ ಕೂಡಿದ ಅಗ್ನಿಯೆಂಬ ದೊಡ್ಡದಾದ ಆಶ್ರಯವನ್ನು (ಮನೆಯನ್ನು) ನಾವು ಹೊಂದುವೆವು.

**41. ಅಗ್ನೇ ಜಾತಾನ್ಪ್ರಣುದಾನಃ ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ ನುದಸ್ವ। ಅಸ್ಮೇ ದೀದಿಹಿ ಸುಮನಾ ಅಹೇಳನ್ಛರ್ಮಂತೇ ಸ್ಯಾಮ ತ್ರಿವರೂಥ ಉದ್ಭೌ ॥**

**ಅಗ್ನೇ**=ಅಗ್ನಿದೇವನೇ! **ನಃ ಜಾತಾನ್ ಸಪತ್ನಾನ್**=ನಮಗಿಂತ ಮೊದಲು ಹುಟ್ಟಿದ ನಮ್ಮ ಶತ್ರುಗಳನ್ನು **ಪ್ರಣುದ**=ವಿನಾಶ ಪಡಿಸು, **ಜಾತವೇದ**=ಈ ಹೆಸರಿನಿಂದ ಪ್ರಖ್ಯಾತನಾದ, ಅಗ್ನಿದೇವನೇ! **ಅಜಾತಾನ್**=ನಮಗಿಂತ ಮೊದಲು ಹುಟ್ಟಿರದ, ಇನ್ನು ಮುಂದೆ ಹುಟ್ಟಲಿರುವ ನಮ್ಮ ಶತ್ರುಗಳನ್ನೂ, **ಪ್ರತಿನುದಸ್ವ**= ಹುಟ್ಟುವುದಕ್ಕೆ ಪ್ರತಿಬಂಧಕವನ್ನೊಡ್ಡಿ (ಹುಟ್ಟದಂತೆ ಮಾಡಿ) ಅವರನ್ನು ನಾಶಪಡಿಸು. **ಸುಮನಾ**=ನಮಗೆ ಅನುಗ್ರಹಿಸುವ ವಿಶಾಲವಾದ ಮನಸ್ಸುಳ್ಳ, ನೀನು, **ಅಹೇಳನ್**=ಸಿಟ್ಟುಗೊಳ್ಳದೇ, **ತ್ರಿವರೂಥಃ**=ಪ್ರಾಗ್ವಂಶ, ಸಹೋ ನಾಮಕ ಮಂಟಪ, ಮತ್ತು ಹವಿರ್ಧಾನ ಎಂಬ ಹೆಸರಿನ ಮೂರು ಭಾಗಗಳುಳ್ಳ, ಯಜ್ಞ ಶಾಲೆಯಲ್ಲಿ, **ಉದ್ಭೌ**=ಅನುಷ್ಠಾನ ಮಾಡುವಂತಹ, ವೇದೋಕ್ತವಾದ ಯಜ್ಞ

ಕರ್ಮದ ನಿರ್ವರ್ತಕ (ನಿರ್ವಾಹಕ)ನಾಗಿ, **ಅಸ್ಮೇ ದೀದಿಹಿ**=ನಮ್ಮನ್ನು ಪ್ರಕಾಶಿಸು, **ತೇ**=ನಿನ್ನ ಅನುಗ್ರಹದಿಂದ, **ಶರ್ಮನ್ ಸ್ಯಾಮ**=ಸುಖವನ್ನು ಹೊಂದುತ್ತೇವೆ.

ಅಗ್ನಿದೇವನೇ! ನಮಗಿಂತ ಮೊದಲು ಹುಟ್ಟಿದ ನಮ್ಮ ಶತ್ರುಗಳನ್ನು ನೀನು ನಾಶಪಡಿಸು. ಹಾಗೂ ನೀನು ಅತೀಂದ್ರಿಯ ಶಕ್ತಿಯುಳ್ಳವನಾಗಿರುವುದರಿಂದ (ಹಿಂದಿನ ಮಂತ್ರದಲ್ಲಿ ತಿಳಿಸಿದಂತೆ) ಇನ್ನು ಮುಂದೆ ಜನಿಸಲಿರುವ ನಮ್ಮ ಶತ್ರುಗಳನ್ನು ಹುಟ್ಟುವುದಕ್ಕೆ ಪ್ರತಿಬಂಧಕವನ್ನೊಡ್ಡಿ (ಹುಟ್ಟದಂತೆ) ಅವರನ್ನೂ ನಾಶಪಡಿಸು. ನಮ್ಮನ್ನು ಅನುಗ್ರಹಿಸುವ ವಿಶಾಲವಾದ ಮನೋಭೂಮಿಕೆಯುಳ್ಳ ನೀನು, ಯಜ್ಞಶಾಲೆಯಲ್ಲಿ ಅನುಷ್ಠಾನ ಮಾಡುವ ವೇದಗಳಲ್ಲಿ ಹೇಳಲ್ಪಟ್ಟ ಯಜ್ಞ ಯಾಗಾದಿಗಳ ನಿರ್ವಾಹಕ (ನೆರವೇರುವಂತೆ ಮಾಡುವವನು)ನಾಗಿದ್ದೀಯೆ, ನಿನ್ನ ಅನುಗ್ರಹದಿಂದ ನಾವು ಸುಖವನ್ನು ಹೊಂದುತ್ತೇವೆ.

**42. ಸಹಸಾ ಜಾತಾನ್ಪ್ರಣುದಾನಃ ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ ನುದಸ್ವ ।**
**ಅಧಿ ನೋ ಬ್ರೂಹಿ ಸುಮನಸ್ಯಮಾನೋ ವಯꣳ ಸ್ಯಾಮ ಪ್ರಣುದಾನಃ ಸಪತ್ನಾನ್ ॥**

**ಜಾತವೇದಃ**=ಅಗ್ನಿದೇವನೇ! **ಜಾತಾನ್ ನಃ ಸಪತ್ನಾನ್ ಸಹಸಾ ಆಪ್ರಣುದ**= ಮೊದಲೇ ಹುಟ್ಟಿದ ನಮ್ಮ ವೈರಿಗಳನ್ನು ಕೂಡಲೇ ಪೂರ್ಣವಾಗಿ ನಾಶಮಾಡು. ಹಾಗೂ **ಅಜಾತಾನ್ ಸಪತ್ನಾನ್ ನುದಸ್ವ**=ಮುಂದೆ ಹುಟ್ಟಲಿರುವ ಶತ್ರುಗಳನ್ನು ಹುಟ್ಟದಿರುವಂತೆ ಮಾಡಿ ನಾಶಪಡಿಸು. **ಸುಮನಸ್ಯಮಾನಃ**=ನಮ್ಮಲ್ಲಿ ಉತ್ತಮ ಸೌಹಾರ್ದವನ್ನು ಹೊಂದಿದ ನೀನು **ನೋ ಅಧಿಬ್ರೂಹಿ**=ನಮ್ಮ ಶತ್ರುಗಳಿಗಿಂತ ನಮ್ಮನ್ನು ಶ್ರೇಷ್ಠರನ್ನಾಗಿ ಹೇಳು (ಉಂಟುಮಾಡು) **ವಯಂ ಆಸ್ಯಾಮ**=ನಾವು ನಿನ್ನ ಅನುಗ್ರಹದಿಂದ ಶ್ರೇಷ್ಠರಾಗುವೆವು. **ನಃ ಸಪತ್ನಾನ್ ಪ್ರಣುದ**=ನಮ್ಮ ಶತ್ರುಗಳನ್ನು ನಾಶಪಡಿಸು.

ಅಗ್ನಿದೇವನೇ!, ನೀನು ನಮ್ಮ ಶತ್ರುಗಳನ್ನು ನಾಶಪಡಿಸು. ಹಾಗೂ ಮುಂದೆ ಉತ್ಪತ್ತಿಯಾಗಲಿರುವ ಶತ್ರುಗಳನ್ನೂ ಹುಟ್ಟದಂತೆ ಮಾಡು. ನಮ್ಮಲ್ಲಿ ಉತ್ತಮವಾದ ಸೌಹಾರ್ದ ಭಾವನೆಯನ್ನು ಹೊಂದಿದ ನೀನು ನಮ್ಮ ಶತ್ರುಗಳಿಗಿಂತ ನಮ್ಮನ್ನು ಉತ್ತಮರನ್ನಾಗಿಸು. ನಿನ್ನ ಅನುಗ್ರಹದಿಂದ ನಾವು ಶ್ರೇಷ್ಠರಾಗುವೆವು. ನಮ್ಮ ಶತ್ರುಗಳನ್ನು ನಾಶಪಡಿಸಿ ನಮ್ಮನ್ನು ಅನುಗ್ರಹಿಸು.

**43. ಅಗ್ನೇ ಯೋ ನೋಽಭಿತೋ ಜನೋ ವೃಕೋ ವಾರೋ ಜಿಘಾಂಸತಿ ।
ತಾಂ ಸ್ತ್ವಂ ವೃತ್ರಹಞ್ಜಹಿ ವಸ್ವಸ್ಮಭ್ಯಮಾ ಭರ ॥**

**ಅಗ್ನೇ**=ಅಗ್ನಿದೇವನೇ! **ಯಃ**=ಯಾವ ನಮ್ಮ ಶತ್ರುವು, **ವೃಕಃ**=ಕಾಡುನಾಯಿ-ಯಂತೆ (ತೋಳ) ಕಿರುಕುಳ ಕೊಡುತ್ತಾನೋ, ಹಾಗೂ, **ವಾರಃ**=ನಮ್ಮ ಕಾರ್ಯಗಳನ್ನೆಲ್ಲ ನಾಶಮಾಡುವವನಾಗಿ, **ಅಭಿತೋ ಜಿಘಾಂಸತಿ**=ಎಲ್ಲಾ ವಿಧದಲ್ಲೂ ನಮಗೆ ಹಿಂಸೆಯನ್ನು ಉಂಟುಮಾಡುತ್ತಾನೋ, **ತಾನ್**=ಆ ಕಾಡುನಾಯಿ (ತೋಳ)ಯಂತೆ ಹಿಂಸೆ ಕೊಡುವ ನಮ್ಮ ಶತ್ರುಗಳನ್ನು, **ವೃತ್ರಹನ್**=ಶತ್ರುನಾಶಕನಾದ, ಅಗ್ನಿದೇವನೇ, ನೀನು, ಜಹಿ=ವಿನಾಶ ಮಾಡು, **ಅಸ್ಮಭ್ಯಂ ವಸು ಆಭರ**=ನಮಗೆ ಸಂಪತ್ತನ್ನು ಒದಗಿಸು.

ಅಗ್ನಿದೇವನೇ! ತೋಳದಂತೆ ನಮ್ಮನ್ನು ಕಿತ್ತು ತಿನ್ನುವ ಮತ್ತು ನಮ್ಮ ಕಾರ್ಯಗಳನ್ನೆಲ್ಲ ನಾಶ ಮಾಡುವ ಸರ್ವ ವಿಧದಲ್ಲೂ ನಮ್ಮನ್ನು ಹಿಂಸಿಸುತ್ತಿರುವ ಆ ನಮ್ಮ ಶತ್ರುಗಳನ್ನು, ಶತ್ರುನಾಶಕನಾದ ನೀನು, ವಿನಾಶ ಮಾಡಿ ನಮ್ಮನ್ನು ಸಂರಕ್ಷಿಸು, ಹಾಗೂ ನಮಗೆ ಸಂಪತ್ತನ್ನು ಅನುಗ್ರಹಿಸು.

**44. ಅಗ್ನೇ ಯೋ ನೋಽಭಿದಾಸತಿ ಸಮಾನೋ ಯಶ್ಚ ನಿಷ್ಟ್ಯಃ । ತಂ ವಯಂ
ಸಮಿಧಂ ಕೃತ್ವಾ ತುಭ್ಯಮಗ್ನೇಽಪಿ ದಧ್ಮಸಿ ॥**

**ಅಗ್ನೇ**=ಅಗ್ನಿದೇವನೇ! **ಯಃ**=ಯಾವ ಪ್ರಬಲನಾದ ಶತ್ರುವು, **ನಃ ಅಭಿದಾಸತಿ**=ನಮ್ಮನ್ನು ಹಿಂಸಿಸುತ್ತಾನೋ, **ಯಶ್ಚ ಸಮಾನಃ**=ಸಮಾನ ಬಲವುಳ್ಳ ಯಾವ ಶತ್ರುವು, **ನಿಷ್ಟ್ಯಃ**=ಪ್ರತಿನಿತ್ಯವೂ, ಕಿರುಕುಳ ಉಂಟುಮಾಡುತ್ತಾನೋ, **ವಯಂ ತಂ**=ನಾವು ಆ ಹಿಂಸಕನನ್ನು, **ಸಮಿಧಂ ಕೃತ್ವಾ**=ಇಂಧನ ಸಾಧನವಾದ ಸಮಿತ್ತಿನಂತೆ (ಕಟ್ಟಿಗೆಯಂತೆ) ಮಾಡಿ, **ಅಗ್ನೇ**=ಅಗ್ನಿದೇವನೇ! **ತುಭ್ಯಂ-ಅಪದಧ್ಮಸಿ**=ನಿನಗೋಸ್ಕರ ಅಗ್ನಿಯಲ್ಲಿ ಎಸೆಯುವೆನು.

ಅಗ್ನಿದೇವನೇ! ಯಾವ ಪ್ರಬಲನಾದ ಶತ್ರುವು ನಮ್ಮನ್ನು ಹಿಂಸಿಸುತ್ತಾನೋ, ಹಾಗೂ ನಮ್ಮ ಸಮಾನ ಬಲವುಳ್ಳವನಾಗಿಯೂ ಸದಾ ಕಾಲ ಪೀಡೆಯನ್ನುಂಟು ಮಾಡುತ್ತಾನೋ, ಆ ಹಿಂಸಕರನ್ನು ಕಟ್ಟಿಗೆಯನ್ನು ಅಗ್ನಿಯಲ್ಲಿ ಹಾಕಿ ಉರಿಸುವಂತೆ ನಿನಗೋಸ್ಕರ ಇಂಧನವನ್ನಾಗಿ ಮಾಡಿ ಎಸೆಯುತ್ತೇನೆ. ನೀನು ಅವರನ್ನು ಭಸ್ಮಗೊಳಿಸು.

**45. ಯೋ ನಃ ಶಪಾದಶಪತೋ ಯಶ್ಚ ನಃ ಶಪತಃ ಶಪಾತ್ । ಉಷಾಶ್ಚ ತಸ್ಮೈ ನಿಮ್ರುಕ್ಚ ಸರ್ವಂ ಪಾಪಃ ಸಮೂಹತಾಮ್ ॥**

**ಅಶಪತಃ**=ಕೋಪವಿಲ್ಲದಿರುವಾಗಲೂ, **ಯಃ**=ಯಾವ ವೈರಿಯು, **ಶಪಾತ್**=ನಿಂದಿಸುತ್ತಾನೋ, **ಯಶ್ಚ**=ಯಾವ ಬೇರೆ ವೈರಿಯು **ಶಪತಃ**=ನಿಂದಿಸಿದ್ದಕ್ಕಾಗಿ **ನಃ ಶಪಾತ್**=ನಮ್ಮನ್ನು ದೂಷಿಸುತ್ತಾನೋ, **ತಸ್ಮೈ**=ಅದಕ್ಕೋಸ್ಕರವಾಗಿ **ಉಷಾಶ್ಚ ನಿಮ್ರುಕ್ಚ**=ಉದಯಾಸ್ತಮಯ ದೇವತೆಗಳು ಅಥವಾ ಅಹೋರಾತ್ರ ದೇವತೆಗಳು, **ಸರ್ವಂ ಪಾಪಂ**=ನಮ್ಮ ಎಲ್ಲಾ ಪಾಪಗಳನ್ನೂ **ಸಮೂಹತಾಮ್**=ಸೇರಿಸಿ, ಅವನಲ್ಲೇ ಇಡಲಿ.

ಕೋಪವಿಲ್ಲದಾಗಲೂ (ವಿನಾಕಾರಣ) ಯಾವ ವೈರಿಯು ನಮ್ಮನ್ನು ನಿಂದಿಸುತ್ತಾನೋ, ಹಾಗೂ ಬೇರೆಯವರಿಂದ ನಿಂದಿಸಲ್ಪಟ್ಟವನಾಗಿ, ಕಾರಣವಿಲ್ಲದಿದ್ದರೂ, ನಮ್ಮನ್ನು ದೂಷಿಸುತ್ತಾನೋ, ಅಂತಹ ವೈರಿಗಳಲ್ಲಿ ನಮ್ಮ ಎಲ್ಲಾ ಪಾಪಗಳನ್ನೂ ಸೇರಿಸಿ, ಇಟ್ಟು ದಿವಾರಾತ್ರಾಭಿಮಾನಿ ದೇವತೆಗಳು, ಅಥವಾ ಉದಯಾಸ್ತಮಯ ಅಭಿಮಾನಿ ದೇವತೆಗಳು ನಮ್ಮನ್ನು ಅನುಗ್ರಹಿಸಲಿ.

**46. ಯೋ ನಃ ಸಪತ್ನೋ ಯೋ ರಣೋ ಮರ್ತೋಽಭಿದಾಸತಿ ದೇವಾಃ । ಇಧ್ಮಸ್ಯೇವ ಪ್ರಕ್ಷಾಯತೋ ಮಾ ತಸ್ಯೋಚ್ಛೇಷಿ ಕಿಂಚನ ॥**

**ದೇವಾಃ**=ದೇವತೆಗಳೇ! **ಯಃ ಮರ್ತಃ ನಃ ಸಪತ್ನಃ**=ಯಾವನು ನಮ್ಮ ವೈರಿಯಾಗಿದ್ದು, ನಮ್ಮ ಅನಿಷ್ಟವನ್ನೇ ಸದಾ ಚಿಂತಿಸುತ್ತಿರುತ್ತಾನೋ, **ಯೋ ರಣಃ**=ಯಾವನು ನಮ್ಮೊಡನೆ ಯುದ್ಧ ಮಾಡುವವನಾಗಿ, **ಅಭಿದಾಸತಿ**=ನಮಗೆ ಬೆದರಿಕೆಯನ್ನೊಡ್ಡುವನೋ, **ತಸ್ಯ**=ಈ ಎರಡೂ ವಿಧವಾದ ಶತ್ರುಗಳ, **ಕಿಂಚನ**=ಸಂಪತ್ತುಗಳನ್ನು **ಮೋಚ್ಛೇಷಿ**=ಉಳಿಸಬೇಡಿರಿ. (ನಾಶ ಪಡಿಸಿರಿ) **ಪ್ರಕ್ಷಾಯತಃ ಇಧ್ಮಸ್ಯ** ಇವ=ಉರಿಯುತ್ತಿರುವ ಕಟ್ಟಿಗೆಯು ಹೇಗೆ ಏನೂ ಉಳಿಯದೆ ಪೂರ್ತಿಯಾಗಿ ಭಸ್ಮವಾಗುವುದೋ ಹಾಗೆ ನಾಶಮಾಡಿರಿ.

ದೇವತೆಗಳೇ! ಯಾವನು ನಮ್ಮ ವೈರಿಯಾಗಿದ್ದು ಸದಾಕಾಲ ನಮ್ಮ ಅನಿಷ್ಟವನ್ನೇ ಚಿಂತಿಸುತ್ತಿರುತ್ತಾನೋ, ಯಾರು ನಮ್ಮೊಡನೆ ಯುದ್ಧ ಮಾಡುವವನಾಗಿ ನಮಗೆ ಬೆದರಿಕೆಯನ್ನು ಒಡ್ಡುವನೋ, ಈ ಎರಡೂ ವಿಧವಾದ ಶತ್ರುಗಳ ಸಂಪತ್ತುಗಳನ್ನು ಸಂಪೂರ್ಣವಾಗಿ ನಾಶ ಮಾಡಿರಿ. ಹೇಗೆ ಲೋಕದಲ್ಲಿ ಅಗ್ನಿಯಿಂದ ಚೆನ್ನಾಗಿ ಹೊತ್ತಿಕೊಂಡು, ಉರಿಯುತ್ತಿರುವ ಕಟ್ಟಿಗೆಯು ಸಂಪೂರ್ಣವಾಗಿ ಭಸ್ಮವಾಗಿ

ಕಟ್ಟಿಗೆಯ ಅಂಶವು ಸ್ವಲ್ಪವೂ ಉಳಿಯುವುದಿಲ್ಲವೋ, ಹಾಗೆ ನಮ್ಮ ಶತ್ರುಗಳನ್ನು ಸಂಪೂರ್ಣವಾಗಿ ನಾಶ ಮಾಡಿ ನಮ್ಮನ್ನು ರಕ್ಷಿಸಿರಿ.

**47. ಯೋ ಮಾಂ ದ್ವೇಷ್ಟಿ ಜಾತವೇದೋ ಯಂ ಚಾಹಂ ದ್ವೇಷ್ಮಿ ಯಶ್ಚ ಮಾಮ್ ।**
**ಸರ್ವಾꣳ ಸ್ತಾನಗ್ನೇ ಸಂದಹ ಯಾꣳ ಶ್ಚಾಹಂ ದ್ವೇಷ್ಮಿ ಯೇ ಚ ಮಾಮ್ ॥**

**ಜಾತವೇದಃ**=ಅಗ್ನಿದೇವನೇ! **ಯಃ ಮಾಂ ದ್ವೇಷ್ಟಿ**=ಯಾವ ಶತ್ರುವು ನನ್ನನ್ನು ಪ್ರತ್ಯಕ್ಷವಾಗಿ ದ್ವೇಷಿಸುತ್ತಾನೋ, **ಅಹಂ ಚ ಯಂ ದ್ವೇಷ್ಮಿ**=ನಾನು ಯಾವನನ್ನು ಪ್ರತ್ಯಕ್ಷವಾಗಿ ದ್ವೇಷಿಸುತ್ತೇನೋ, **ಯಶ್ಚ ಮಾಂ**=ಯಾವನು ನನ್ನನ್ನು ಪರೋಕ್ಷವಾಗಿ ದ್ವೇಷಿಸುತ್ತಾನೋ ಹಾಗೂ ನಾನು ಯಾರನ್ನು ಪರೋಕ್ಷವಾಗಿ ದ್ವೇಷಿಸುತ್ತೇನೋ, **ತಾನ್ ಸರ್ವಾನ್**=ಈ ಎಲ್ಲಾ ವಿಧವಾದ (ನಾಲ್ಕೂ ವಿಧವಾದ) ಶತ್ರುಗಳನ್ನೂ, **ಅಗ್ನೇ**=ಅಗ್ನಿ ದೇವನೇ! ನೀನು **ಸಂದಹ**=ಸುಟ್ಟು ಭಸ್ಮ ಮಾಡು, **ಯಾಂಶ್ಚ ಅಹಂ ದ್ವೇಷ್ಮಿ ಯೇ ಚ ಮಾಂ**=ಇವರ ಜೊತೆಗೆ ಇನ್ನೂ ಬೇರೆ ಯಾರಾದರೂ ನನ್ನನ್ನು ದ್ವೇಷಿಸುವವರು ಮತ್ತು ನನ್ನಿಂದ ದ್ವೇಷಿಸಲ್ಪಡುವವರು ಇದ್ದರೂ ಅವರನ್ನೂ ನಾಶಪಡಿಸು.

ಅಗ್ನಿದೇವನೇ! ಯಾವ ಶತ್ರುವು ನನ್ನನ್ನು ಪ್ರತ್ಯಕ್ಷವಾಗಿ ದ್ವೇಷಿಸುತ್ತಾನೋ ಹಾಗೂ ನಾನು ಯಾರನ್ನು ಪ್ರತ್ಯಕ್ಷವಾಗಿ ದ್ವೇಷಿಸುತ್ತೇನೋ ಮತ್ತು ಯಾರು ಪರೋಕ್ಷವಾಗಿ ನನ್ನನ್ನು ದ್ವೇಷಿಸುತ್ತಾರೋ, ಮತ್ತು ಯಾರನ್ನು ನಾನು ಪರೋಕ್ಷ-ವಾಗಿ ದ್ವೇಷಿಸುತ್ತೇನೋ ಈ ಎಲ್ಲಾ ವಿಧವಾದ (ನಾಲ್ಕೂ ವಿಧವಾದ) ಶತ್ರುಗಳನ್ನು ಸುಟ್ಟು ಭಸ್ಮ ಮಾಡಿ ನನ್ನನ್ನು ರಕ್ಷಿಸು.

**48. ಯೋ ಅಸ್ಮಭ್ಯಮರಾತೀಯಾದ್ಯಶ್ಚ ನೋ ದ್ವೇಷತೇ ಜನಃ । ನಿಂದಾದ್ಯೋ**
**ಅಸ್ಮಾನ್ದಿಪ್ಸಾಚ್ಚ ಸರ್ವಾꣳ ಸ್ತಾನ್ಮಷ್ಮಷಾ ಕುರು ॥**

**ಯೋ ಅಸ್ಮಭ್ಯಮರಾತೀಯಾತ್**=ಯಾವನು ನಮಗೆ ಕೊಡಬೇಕಾಗಿರುವ ಹಣವನ್ನು, ಕೊಡದೇ ಇದ್ದಾನೋ, ಅಂತಹ ''ಅರಾತಿ''ಯನ್ನು, **ಯಶ್ಚ ಜನಃ ದ್ವೇಷತೇ**=ಯಾವನು ನಮ್ಮ ಕಾರ್ಯಗಳನ್ನು ನಾಶಮಾಡುವವನಾಗಿ ನಮ್ಮನ್ನು ದ್ವೇಷಿಸುತ್ತಾನೋ, **ಯಃ ನಿಂದಾತ್**=ಯಾವನು ನಮ್ಮನ್ನು ದೌರ್ಜನ್ಯದಿಂದ ನಿಂದಿಸುತ್ತಾನೋ, **ಯಶ್ಚ**=ಯಾವನು **ಅಸ್ಮಾನ್ ದಿಪ್ಸಾತ್**=ನಮ್ಮನ್ನು ಹಿಂಸಿಸಲು ಇಚ್ಛಿಸುತ್ತಾನೋ, **ತಾನ್ ಸರ್ವಾನ್**=ಈ ಎಲ್ಲರನ್ನೂ, ಅಂದರೆ, ಅರಾತಿ, ದ್ವೇಷಿ,

ನಿಂದಕ ಮತ್ತು ಹಿಂಸಕರಾದ ನಮ್ಮ ವೈರಿಗಳನ್ನು **ಮಷ್ಮಷಾಕುರು**=(ಕುಟ್ಟುವುದು ಮತ್ತು ಭಸ್ಮ ಮಾಡುವ ಕ್ರಿಯೆಯ ಶಬ್ದದ ಅನುಕರಣೆ=ಮಷ್ಮಷಾ ಎಂಬುದಾಗಿ) ಹಿಟ್ಟುಮಾಡಿ, ಭಸ್ಮ ಮಾಡಿ ನಾಶಪಡಿಸು.

ವಿದ್ವೇಷಿಗಳು ಎರಡು ವಿಧ, ಒಂದು- ಶತ್ರುಗಳು, ಇನ್ನೊಂದು- ಹಿಂಸಕರು. ಈ ಶತ್ರುಗಳು ಪುನಃ ಮೂರು ಬಗೆ :-

1) ಅರಾತಿ (2) ದ್ವೇಷಿ (3) ನಿಂದಕ ಎಂಬುದಾಗಿ

1) ಯಾರು ಕೊಡಬೇಕಾದ ಹಣವನ್ನು ಕೊಡುವುದಿಲ್ಲವೋ ಅವರು ''ಅರಾತಿ''ಗಳು.

2) ಯಾರು ನಮ್ಮ ಕಾರ್ಯವನ್ನು ವಿನಾಶ ಪಡಿಸುವರೋ, ಅಥವಾ ಪ್ರತಿಬಂಧಕವನ್ನು ಒಡ್ಡುವರೋ ಅವರು ''ದ್ವೇಷಿಗಳು.''

3) ಯಾವನು ಮಾತಿನ ಮೂಲಕ ದೌರ್ಜನ್ಯವನ್ನು ಆಪಾದಿಸುವನೋ, ವಿನಾ ಕಾರಣ ಆಪಾದನೆಯನ್ನು ಹೊರಿಸುವನೋ, ಅವನು ''ನಿಂದಕ''ನು.

ಎರಡನೇ ವಿಭಾಗ ಹಿಂಸಕ.

ಕೊಲ್ಲಲು ಪ್ರಯತ್ನಿಸುವವನೇ=ಹಿಂಸಕನು. ಹೀಗೆ ಶತ್ರುಗಳಲ್ಲಿ ಅವಾಂತರ ಪ್ರಭೇದ.

ಯಾವನು ನಮಗೆ ಕೊಡಬೇಕಾದ ಹಣವನ್ನು ಕೊಟ್ಟಿಲ್ಲವೋ ಅಂತಹ ''ಅರಾತಿ''ಯನ್ನು, ಯಾವನು ನಮ್ಮ ಕಾರ್ಯಗಳನ್ನು ನಾಶಪಡಿಸುತ್ತಾ ದ್ವೇಷಿಸು-ವವನಾಗಿ ''ದ್ವೇಷಿ''ಯಾಗಿದ್ದಾನೋ, ಮತ್ತು ಯಾರು ನಮ್ಮ ಮೇಲೆ ದೌರ್ಜನ್ಯ-ದಿಂದ ನಿಂದಿಸುತ್ತ ''ನಿಂದಕ''ನಾಗಿದ್ದಾನೋ, ಯಾವನು ಹಿಂಸಿಸುವವನಾಗಿ ''ಹಿಂಸಕ''ನಾಗಿದ್ದಾನೋ, ಈ ಎಲ್ಲಾ ವಿಧದ ಶತ್ರುಗಳನ್ನೂ ಕುಟ್ಟಿ ಹಿಟ್ಟು ಮಾಡಿ ಭಸ್ಮ ಮಾಡು, ಅಂದರೆ ಸಂಪೂರ್ಣವಾಗಿ ನಾಶಮಾಡಿ ನಮ್ಮನ್ನು ರಕ್ಷಿಸು.

**49. ಸಂಶಿ॑ತಂ ಮೇ ಬ್ರಹ್ಮ॒ ಸಂಶಿ॑ತಂ ವೀ॒ರ್ಯಂ॑೩ ಬಲ॑ಮ್ । ಸಂಶಿ॑ತಂ ಕ್ಷ॒ತ್ರಂ ಮೇ ಜಿ॒ಷ್ಣು ಯಸ್ಯಾ॒ಹಮಸ್ಮಿ॑ ಪು॒ರೋಹಿ॑ತಃ ॥**

**ಮೇ**=ನನ್ನ, **ಬ್ರಹ್ಮ**=ಬ್ರಾಹ್ಮಣ್ಯವು, **ಸಂಶಿತಂ**=ಶಾಸ್ತ್ರೀಯ ರೀತಿಯಲ್ಲಿ ಇರುವಂತೆ ಆಯಿತು. (ಸ್ಥಾಪಿತವಾಯಿತು) ಹಾಗೂ **ವೀರ್ಯಂ**=ಇಂದ್ರಿಯಗಳ ಶಕ್ತಿ ಮತ್ತು

**ಬಲಂ**=ಶರೀರ ಶಕ್ತಿ, ಈ ಎರಡೂ ಸಹ **ಸಂಶಿತಂ**=ತಮ್ಮ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುವಂತೆ ಮಾಡಲ್ಪಟ್ಟವು. ಹಾಗೂ **ಯಸ್ಯ**=ಯಾವ, **ಕ್ಷತ್ರಸ್ಯ**=ರಾಜನ, **ಪುರೋಹಿತಃ**=**ಅಹಮಸ್ಮಿ**=ಪುರೋಹಿತನು ನಾನಾಗಿದ್ದೇನೋ, **ಆ ಕ್ಷತ್ರಂ**=ಕ್ಷಾತ್ರ ಧರ್ಮದ (ರಾಜನು) **ಜಿಷ್ಣು ಸಂಶಿತಮ್**=ಜಯಶೀಲ ನಾಗುವಂತೆ ಆಗಲಿ.

ಈ ಕೂಶ್ಮಾಂಡ ಹೋಮದ ಅನುಷ್ಠಾನದಿಂದ ಸಂತೃಪ್ತನಾದ ಅಗ್ನಿದೇವನ ಅನುಗ್ರಹದಿಂದ ನನ್ನ ಪಾಪಾದಿಗಳೆಲ್ಲ ಪರಿಹಾರವಾಗಿ, ನನ್ನ ಬ್ರಾಹ್ಮಣ್ಯವು ಶಾಸ್ತ್ರೀಯವಾದ ಸ್ವರೂಪವನ್ನು ಹೊಂದಿತು. ಇಂದ್ರಿಯಗಳ ಶಕ್ತಿ ಮತ್ತು ಶರೀರ ಶಕ್ತಿಯೂ ಸಹ ದೋಷವಿಮೋಚನೆಯಾಗಿರುವುದರಿಂದ ಸರಿಯಾದ ರೀತಿಯಲ್ಲಿ ತಮ್ಮ ಕಾರ್ಯವನ್ನು ನಿರ್ವಹಿಸಲು, ಸಮರ್ಥವಾದವು, ಹಾಗೂ ನಾನು ಯಾವ ರಾಜನಿಗೆ (ರಾಜ್ಯಕ್ಕೆ) ಪುರೋಹಿತನಾಗಿದ್ದೇನೋ, ಆ ರಾಜನೂ ಜಯಶೀಲನಾಗುವಂತೆ ಆಗಲಿ.

**50. ಉದೇಷಾಂ ಬಾಹೂ ಅತಿರಮುದ್ವರ್ಚೋ ಅಥೋ ಬಲಮ್ । ಕ್ಷಿಣೋಮಿ ಬ್ರಹ್ಮಣಾಽಮಿತ್ರಾನುನ್ನಯಾಮಿ ಸ್ವಾಂ೨ ಅಹಮ್ ॥**

**ಏಷಾಂ**=ನನಗೆ ಸಂಬಂಧಿಸಿದ ರಾಜ ಮತ್ತು ಬ್ರಾಹ್ಮಣಾದಿಗಳ, **ಬಾಹೂ ಉದತಿರಮ್**=ಒಬ್ಬರಿಗಿಂತ ಮೇಲೆ ಇನ್ನೊಬ್ಬರು ಎಂಬಂತೆ ಕೈಗಳನ್ನು ಒಬ್ಬೊಬ್ಬರಿಗಿಂತ ಮೇಲಾಗಿ ಮಾಡುತ್ತೇನೆ. **ವರ್ಚಃ**=ಕಾಂತಿಯನ್ನು, **ಅಥೋ**=ಹಾಗೂ, **ಬಲಮ್**=ಶರೀರ ಶಕ್ತಿಯನ್ನು ವರ್ಧಿಸುವಂತೆ ಮಾಡುತ್ತೇನೆ. **ಬ್ರಹ್ಮಣಾ**=ಮಂತ್ರ ಸಾಮರ್ಥ್ಯದಿಂದ, **ಅಮಿತ್ರಾನ್**=ಶತ್ರುಗಳನ್ನು **ಕ್ಷಿಣೋಮಿ**=ನಾಶಪಡಿಸುವೆನು, **ಸ್ವಾನ್**=ನನ್ನವರನ್ನು, **ಅಹಂ ಉನ್ನಯಾಮಿ**=ನಾನು ಅಭಿವೃದ್ಧಿ ಹೊಂದುವಂತೆ ಮಾಡುತ್ತೇನೆ.

ಅಗ್ನಿದೇವನ ಪ್ರಸಾದದಿಂದ ನನಗೆ ಸಂಬಂಧಿಸಿದ ರಾಜ ಮತ್ತು ಬ್ರಾಹ್ಮಣಾದಿಗಳು ಒಬ್ಬರಿಗಿಂತ ಒಬ್ಬರು ಹೆಚ್ಚು ಉತ್ಕೃಷ್ಟರಾಗುವಂತೆ ಮಾಡುವೆನು, ಎಲ್ಲರೂ ಸುಖವಾಗಿರುವಂತೆ ಮಾಡುವೆನು. ಅವರೆಲ್ಲರ ಶರೀರ ಕಾಂತಿ ಮತ್ತು ಶರೀರ ಶಕ್ತಿಯನ್ನು ವರ್ಧಿಸುವಂತೆ ಮಾಡುವೆನು, ಮಂತ್ರದ ಶಕ್ತಿಯಿಂದ ಶತ್ರುಗಳನ್ನು ನಾಶ ಪಡಿಸುತ್ತೇನೆ. ನನ್ನವರನ್ನು ನಾನು ಅಭಿವೃದ್ಧಿ ಹೊಂದುವಂತೆ ಮಾಡುತ್ತೇನೆ.

**51. ಪುನರ್ಮನಃ ಪುನರಾಯುರ್ಮ ಆಗಾತ್ಪುನಶ್ಚಕ್ಷುಃ ಪುನಃ ಶ್ರೋತ್ರಂ ಮ ಆಗಾತ್ಪುನಃ ಪ್ರಾಣಃ ಪುನರಾಕೂತಂ ಮ ಆಗಾತ್ಪುನಶ್ಚಿತ್ತಂ ಪುನರಾಧೀತಂ ಮ**

**ಆಗಾತ್ । ವೈಶ್ವಾನರೋ ಮೇಽದಬ್ಧ ಸ್ತನೂಪಾ ಅವಬಾಧತಾಂ ದುರಿತಾನಿ ವಿಶ್ವಾ ॥**

ಮನಸ್ಸು, ಪ್ರಾಣ, ಇಂದ್ರಿಯಾದಿಗಳು, ಪಾಪದ ಕಾರಣದಿಂದ ಕ್ಷೀಣತೆಯನ್ನು ಹೊಂದಿದ್ದು, ಈ ಕೂಶ್ಮಾಂಡ ಹೋಮದ ಅನುಷ್ಠಾನದಿಂದ ಆ ಪಾಪ ಶೇಷವೆಲ್ಲ ಪರಿಹಾರವಾಗಲಾಗಿ, **ಮೇ ಮನಃ ಪುನರಾಗಾತ್**=ನನ್ನ ಮನಸ್ಸು ಈ ಶರೀರದಲ್ಲಿ ಪುನಃ (ಚೆನ್ನಾಗಿ) ಬಂದು ಸೇರಲಿ, ಹಾಗೂ **ಆಯುಃ**=ಆಯುಷ್ಯವು ಬಂದು ಸೇರಲಿ, **ಪುನಃ ಚಕ್ಷುಃ**=ಕಣ್ಣುಗಳು ಪುನಃ ಬಂದು ಸೇರಲಿ, **ಪುನಃ ಶ್ರೋತ್ರಂ** ಕಿವಿಗಳು ಶರೀರದಲ್ಲಿ ಬಂದು ಸೇರಲಿ. **ಪುನಃ ಪ್ರಾಣಃ**=ಪ್ರಾಣಗಳೂ ಪುನಃ ಬಂದು ಸೇರಲಿ, **ಮೇ ಆಕೂತಂ-ಆಗಾತ್**=ನನ್ನ ಸಂಕಲ್ಪಿತ ಕಾರ್ಯವು ಚೆನ್ನಾಗಿ ನೆರವೇರಲಿ, **ಪುನಶ್ಚಿತ್ತಂ**=ಮನಸ್ಸಿನಿಂದ ಹುಟ್ಟಿದ ಜ್ಞಾನವು, **ಆಧೀತಂ**= ಸಂಪೂರ್ಣವಾಗಿ ಅಧ್ಯಯನ ಮಾಡಿದ ವೇದ, ಈ ಎಲ್ಲವುಗಳೂ ಬಂದು ಚೆನ್ನಾಗಿ ಸ್ಥಿತಿಯನ್ನು ಹೊಂದುವುದಕ್ಕೋಸ್ಕರ **ಅದಬ್ಧಃ ತನೂಪಾ-ವೈಶ್ವಾನರಃ**= ಯಾರಿಂದಲೂ ಹಿಂಸಿಸಲ್ಪಡದ, ನನ್ನ ಶರೀರ ಪಾಲಕನಾದ ''ವೈಶ್ವಾನರ'' ಎಂದೇ ಪ್ರಖ್ಯಾತಿ ಹೊಂದಿದ ಅಗ್ನಿದೇವನು **ಮೇ ವಿಶ್ವಾದುರಿತಾನಿ**=ನನ್ನ ಎಲ್ಲಾ ಪಾಪಗಳನ್ನೂ **ಅವಬಾಧತಾಂ**=ವಿನಾಶಪಡಿಸಲಿ.

ನನ್ನಿಂದ ಮಾಡಲ್ಪಟ್ಟ ನಿಷಿದ್ಧ ಕರ್ಮಗಳಿಂದ ಉಂಟಾದ ಪಾಪದ ಕಾರಣದಿಂದ ನನ್ನ ಮನಸ್ಸು, ಪ್ರಾಣ, ಇಂದ್ರಿಯಾದಿಗಳೆಲ್ಲ ಕ್ಷೀಣತೆಯನ್ನು ಹೊಂದಿದ್ದು, ಈ ಕೂಶ್ಮಾಂಡ ಹೋಮದ ಅನುಷ್ಠಾನದಿಂದ ಆ ಪಾಪ ಶೇಷವೆಲ್ಲ ಪರಿಹಾರವಾಗಲಾಗಿ : ನನ್ನ ಮನಸ್ಸು, ಆಯುಷ್ಯ, ಕಣ್ಣುಗಳು, ಕಿವಿಗಳು, ಪ್ರಾಣ ಇವುಗಳೆಲ್ಲ ನನ್ನ ಶರೀರದಲ್ಲಿ ಬಂದು ಉತ್ತಮವಾದ ಸ್ಥಿತಿಯನ್ನು (ಸಾಮರ್ಥ್ಯವನ್ನು) ಹೊಂದಲಿ. ಶಕ್ತಿಶಾಲಿಗಳಾಗಿ ಶರೀರದಲ್ಲಿರುವಂತೆ ಆಗಲಿ ಹಾಗೂ ಸಂಕಲ್ಪಿತ ಕಾರ್ಯವು ಚೆನ್ನಾಗಿ ನೆರವೇರುವಂತೆ ಆಗಲಿ ಮತ್ತು ಮನಸ್ಸಿನಲ್ಲಿ ಉಂಟಾದ ಜ್ಞಾನ ಹಾಗೂ ಸಂಪೂರ್ಣವಾಗಿ ಮಾಡಿದ ವೇದಾಧ್ಯಯನ ಈ ಎಲ್ಲವೂ ನನ್ನಲ್ಲಿ ಸುಸ್ಥಿತಿಯನ್ನು ಹೊಂದುವುದಕ್ಕೋಸ್ಕರವಾಗಿ, ಯಾರಿಂದಲೂ ಹಿಂಸಿಸಲ್ಪಡದ, ನನ್ನ ಶರೀರದ ಪಾಲಕನಾದ ಅಗ್ನಿದೇವನು ನನ್ನ ಎಲ್ಲಾ ವಿಧವಾದ ಪಾಪಗಳನ್ನೂ ವಿನಾಶಪಡಿಸಿ ನನ್ನನ್ನು ಅನುಗ್ರಹಿಸಲಿ.



# ''ಉಪಸ್ಥಾನ ಮಂತ್ರಾರ್ಥ''

ಕೂಶ್ಮಾಂಡ ಮಂತ್ರಗಳಿಂದ ಹೋಮವನ್ನು ಮಾಡಿ, ಈ ಮುಂದಿನ ಮಂತ್ರಗಳಿಂದ ಅಗ್ನಿ ಸನ್ನಿಧಿಯಲ್ಲಿ ಪ್ರಾರ್ಥನೆ ವಿಧಾನವಾಗಿದೆ. ಇದಕ್ಕೆ ''ಉಪಸ್ಥಾನ'' ಎಂದು ಹೆಸರು. ಈ ಕೂಶ್ಮಾಂಡ ಹೋಮದಲ್ಲಿ ಒಟ್ಟು ಹನ್ನೆರಡು ಉಪಸ್ಥಾನ ಮಂತ್ರಗಳು ಹೇಳಲ್ಪಟ್ಟಿವೆ. ಅವುಗಳೆಂದರೆ—

1. **ವೈಶ್ವಾನರಾಯ ಪ್ರತಿವೇದಯಾಮೋ ಯದೀನೃಣꣳ ಸಂಗರೋ ದೇವತಾಸು ।**
**ಸ ಏತಾನ್ಪಾಶಾನ್ಪ್ರಮುಚನ್ಪ್ರವೇದ ಸ ನೋ ಮುಂಚಾತು ದುರಿತಾದವದ್ಯಾತ್ ॥**

**ಯದೀನೃಣಂ**=ಪ್ರಸಿದ್ಧವಾದ ಋಣಗಳು ಯಾವುದಿವೆಯೋ, **ದೇವತಾಸು ಸಂಗರಃ**=ಅವುಗಳನ್ನು ದೇವತೆಗಳಲ್ಲಿ ಪ್ರತಿಜ್ಞಾಪಿಸಿದ್ದೇವೆ. ಪ್ರತಿಜ್ಞೆಯು ಹೀಗೆ ತಿಳಿಸಲ್ಪಟ್ಟಿದೆ.— ''ಜಾಯಮಾನೋ ವೈ ತ್ರಿಭಿಃ ಋಣವಾನ್ ಜಾಯತೆ, ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯೋ, ಪ್ರಜಯಾ ಪಿತೃಭ್ಯಃ'' ಎಂಬುದಾಗಿ ಈ ಪ್ರತಿಜ್ಞಾತವಾದ ಮೂರು ರೀತಿಯ ಋಣಗಳನ್ನು, **ವೈಶ್ವಾನರಾಯ ಪ್ರತಿವೇದಯಾಮಃ**=ನಮ್ಮ ಸ್ವಾಮಿಗೆ (ಅಗ್ನಿದೇವನಿಗೆ) ವಿಜ್ಞಾಪಿಸೋಣ. ಇಲ್ಲಿ-ದೇವತೆಗಳಲ್ಲಿ ಪ್ರತಿಜ್ಞಾಪಿತವಾದ ಎಂಬಲ್ಲಿ ದೇವತಾ ಶಬ್ದದಿಂದ ಋಷಿಗಳು ಮತ್ತು ಪಿತೃಗಳೂ ಕೂಡ ಉಪಲಕ್ಷಿತರಾಗಿದ್ದಾರೆ. **ಸಃ**=ಅಗ್ನಿದೇವನು, **ಏತಾನ್ ಪಾಶಾನ್**=ಮೂರೂ ರೀತಿಯ ಋಣರೂಪವಾದ ಬಂಧನವನ್ನು, **ಪ್ರಮುಚನ್**=ಬಿಡಿಸಲು, **ಪ್ರವೇದ**=ಚೆನ್ನಾಗಿ ತಿಳಿದಿರುತ್ತಾನೆ. **ಸಃ**=ಅಭಿಜ್ಞನಾದ ವೈಶ್ವಾನರ (ಅಗ್ನಿ) ದೇವನು **ನಃ ದುರಿತಾನ್**=ನಮ್ಮ ಪರಲೋಕ ಪ್ರಾಪ್ತಿಗೆ (ಸ್ವರ್ಗ ಪ್ರಾಪ್ತಿಗೆ) ವಿರೋಧಿ-ಯಾದ ಪಾಪಗಳಿಂದ ಮತ್ತು **ಅವದ್ಯಾತ್**=ಈ ಲೋಕದಲ್ಲುಂಟಾದ ನಿಂದಾ ದೋಷಗಳಿಂದ **ಮುಂಚಾತು**=ನಮ್ಮನ್ನು ನಿರ್ಮುಕ್ತನನ್ನಾಗಿಸಲಿ.

ದೇವ ಋಣ, ಋಷಿ ಋಣ, ಮತ್ತು ಪಿತೃಋಣಗಳೆಂಬ ಪ್ರಸಿದ್ಧವಾದ ಮೂರು ರೀತಿಯ ಋಣಗಳಿಂದ ವಿಮುಕ್ತಿ ಹೊಂದಲು ದೇವತೆಗಳಲ್ಲಿ ಪ್ರತಿಜ್ಞಾಪಿಸಿದ್ದೇವೆ. ಅಗ್ನಿದೇವನು ಈ ಮೂರು ರೀತಿಯ ಋಣರೂಪವಾದ ಹಗ್ಗದ ಬಂಧನವನ್ನು ಬಿಡಿಸಲು ಚೆನ್ನಾಗಿ ತಿಳಿದವನಾಗಿದ್ದಾನೆ. ಈ ಅಭಿಜ್ಞನಾದ ವೈಶ್ವಾನರ ದೇವನು ನಮ್ಮ ಸ್ವರ್ಗ ಪ್ರಾಪ್ತಿಗೆ ಪ್ರತಿಬಂಧಕರೂಪವಾಗಿರುವ ಪಾಪಗಳನ್ನು ಹಾಗೂ ಈ ಲೋಕದಲ್ಲಿ ನಿಂದಾದೋಷಗಳಿಂದ ಉಂಟಾದ ಪಾಪವನ್ನೂ ಹೋಗಲಾಡಿಸಿ ನಮ್ಮನ್ನು ಪಾಪನಿರ್ಮುಕ್ತನನ್ನಾಗಿಸಲಿ.

2. ವೈಶ್ವಾನರಃ ಪವಯಾನ್ನಃ ಪವಿತ್ರೈರ್ಯತ್ಸಂಗರಮಭಿಧಾವಾಮ್ಯಾಶಾಮ್ ।
ಅನಾಜಾನನ್ಮನಸಾ ಯಾಚಮಾನೋ ಯದತ್ರೈನೋ ಅವ ತತ್ಸುವಾಮಿ ॥

**ವೈಶ್ವಾನರ**=ಅಗ್ನಿದೇವನು, **ನಃ**=ನಮ್ಮನ್ನು **ಪವಿತ್ರೈಃ**=ಶುದ್ಧಿಕಾರಣವಾದ ಈ ಹೋಮದಿಂದ **ಪವಯಾತ್**=ಪವಿತ್ರಗೊಳಿಸಲಿ, **ಯತ್**=ಈ ಪರಿಶೋಧನೆ-ಯಿಂದ (ಪವಿತ್ರಗೊಳಿಸುವಿಕೆಯಿಂದ) ಪವಿತ್ರಗೊಂಡವನಾದ ನಾನು **ಸಂಗರಂ**=ವೇದದಲ್ಲಿ ಹೇಳಲ್ಪಟ್ಟ ಋಣತ್ರಯ ರೂಪವಾದ ಪ್ರತಿಜ್ಞೆಯು, **ಆಶಾಂ ಅಭಿಧಾವಾಮಿ**=ನನ್ನಿಂದ ಪ್ರತ್ಯರ್ಪಿಸಲ್ಪಡಬೇಕು. ಅಥವಾ ನನ್ನಿಂದ ನೆರವೇರ-ಬೇಕು. ಎಂಬ ಬಯಕೆಯನ್ನು ಬೇಗನೆ ಹೊಂದುತ್ತೇನೆ. ಈ ರೀತಿಯಲ್ಲಿ ನನ್ನನ್ನು ಪವಿತ್ರಗೊಳಿಸು. **ಅಜಾನನ್**=ಋಣವನ್ನು ಪರಿಹರಿಸಿಕೊಳ್ಳುವ ಎಲ್ಲಾ ರೀತಿಯ ಉಪಾಯಗಳನ್ನೂ ತಿಳಿಯದಿರುವವನಾಗಿ ನಾನು, **ಮನಸಾ ಯಾಚಮಾನಃ**=''ಋಣ ಮುಕ್ತನಾಗಬೇಕು'' ಎಂಬುದಾಗಿ ಸದಾ ಕಾಲ ಪ್ರಾರ್ಥಿಸುವವ-ನಾಗಿದ್ದೇನೆ. **ಅತ್ರ**=ಪಾಪ ಪರಿಹಾರದ ಸಾಧನವನ್ನು (ಮಾರ್ಗವನ್ನು) ತಿಳಿಯದಿರುವುದಕ್ಕೆ ಪ್ರತಿಬಂಧಕವಾದ, **ಯದೇನಃ**=ಯಾವ ಪಾಪವಿದೆಯೋ, ಆ ಪಾಪವನ್ನು, **ಸುವಾಮಿ**=ಅಗ್ನಿದೇವನ ಪ್ರಸಾದದಿಂದ ಪರಿಹರಿಸಿಕೊಳ್ಳುತ್ತೇನೆ.

ಅಗ್ನಿದೇವನು ಶುದ್ಧಿಕಾರಣವಾದ ಈ ಕೂಶ್ಮಾಂಡ ಹೋಮದಿಂದ ನಮ್ಮನ್ನು ಪವಿತ್ರಗೊಳಿಸಲಿ. ಇದರಿಂದ ಪಾಪವೆಲ್ಲ ಪರಿಹಾರವಾಗಿ ಪವಿತ್ರಗೊಂಡ ನಾನು, ವೇದದಲ್ಲಿ ತಿಳಿಸಿದ ಮೂರೂ ರೀತಿಯ ಋಣಗಳನ್ನು ಪರಿಹರಿಸಿಕೊಳ್ಳಬೇಕು. ಎಂಬ ಸದಿಚ್ಛೆಯನ್ನು (ಬಯಕೆಯನ್ನು) ಹೊಂದುತ್ತೇನೆ. ಆ ರೀತಿಯಲ್ಲಿ ನನ್ನನ್ನು ಪವಿತ್ರಗೊಳಿಸು. ಋಣ ಪರಿಹಾರದ ಮಾರ್ಗವನ್ನು (ಉಪಾಯವನ್ನು) ತಿಳಿಯದಿರುವ ನಾನು ''ಋಣಮುಕ್ತನಾಗಬೇಕು'' ಆ ಮಾರ್ಗವನ್ನು ಪ್ರದರ್ಶಿಸು ಎಂಬುದಾಗಿ ಸದಾಕಾಲ ಪ್ರಾರ್ಥಿಸುವವನಾಗಿದ್ದೇನೆ. ಅಗ್ನಿದೇವನು ಈ ಋಣ ಪರಿಹಾರದ ಮಾರ್ಗವು ತಿಳಿಯುವುದಕ್ಕೆ ಪ್ರತಿಬಂಧಕವಾಗಿರುವ ಪಾಪಗಳನ್ನು ನಾಶಗೊಳಿಸಿ, ಋಣ ಪರಿಹಾರದ ಮಾರ್ಗವನ್ನು ತಿಳಿಯುವಂತೆ ಮಾಡಿ ತನ್ಮೂಲಕ ನಮ್ಮನ್ನು ಋಣತ್ರಯದಿಂದ ಬಿಡುಗಡೆ ಹೊಂದಿಸಿ ಅನುಗ್ರಹಿಸಲಿ.

3. ಅಮೀ ಯೇ ಸುಭಗೇ ದಿವಿ ವಿಚೃತೌ ನಾಮ ತಾರಕೇ । ಪ್ರೇಹಾಮೃತಸ್ಯ ಯಚ್ಛತಾಮೇತದ್ಬದ್ಧಕ ಮೋಚನಮ್ ॥

**ದಿವಿ**=ಆಕಾಶದಲ್ಲಿ, **ವಿಚೃತ್‌ನಾಮ**='ವಿಚೃತ್' ಎಂಬ ಹೆಸರುಳ್ಳ, **ತಾರಕೇ**=ಲೋಕದಲ್ಲಿ ಮೂಲಾ ಎಂಬುದಾಗಿ ಕರೆಯಲ್ಪಡುವ, **ಸುಭಗೇ**=ಸೌಭಾಗ್ಯಯುಕ್ತ-ವಾದ **ಅಮೀ**=ನಮಗೆ, ಪ್ರತ್ಯಕ್ಷವಾಗಿ ತೋರುವ **ಯೇ**=ಎರಡು ನಕ್ಷತ್ರಗಳು, **ಇಹ**=ಈ ಹೋಮದಲ್ಲಿ **ಅಮೃತಸ್ಯ ಪ್ರಯಚ್ಛತಾಮ್**=ಋಣ ಪರಿಹಾರ ರೂಪವಾದ ಸುಖವನ್ನು ಉಂಟು ಮಾಡಲಿ, **ಏತತ್ ಬದ್ಧಕ ಮೋಚನಮ್**=ಈ ಎರಡೂ ನಕ್ಷತ್ರಗಳಿಂದ ಅನುಗ್ರಹಿಸಲ್ಪಟ್ಟ ಋಣ ವಿಮೋಚನೆಯ ರೂಪವಾದ ಸುಖವು ಋಣದಿಂದ ಬದ್ಧನಾದ ನನಗೆ ವಿಮೋಚನೆಯ ಸಾಧನವಾಗಿದೆ. ಪಿತೃದೇವತೆಗಳಾಗಿರುವ ಈ ನಕ್ಷತ್ರಗಳಿಂದ ನಾಮ ಮತ್ತು ವೃತ್ತಿ ಮೊದಲಾದವುಗಳ ಪ್ರಕಾಶನದಿಂದ ಆ ಮೂರೂ ಋಣಗಳಿಂದ ಮುಕ್ತನಾಗುವೆನು.

ಆಕಾಶದಲ್ಲಿ ''ವಿಚೃತ್'' ಎಂಬ ಹೆಸರುಳ್ಳ ಲೋಕದಲ್ಲಿ ''ಮೂಲಾ'' ಎಂಬುದಾಗಿ ಕರೆಯಲ್ಪಡುವ ಎರಡು ಜ್ಯೋತಿರ್ಮಂಡಲ ಹೊಂದಿದ ನಕ್ಷತ್ರಗಳು ಸೌಭಾಗ್ಯಯುಕ್ತವಾಗಿದ್ದು ನಮಗೆ ಪ್ರತ್ಯಕ್ಷವಾಗಿ ತೋರುತ್ತವೆ. ಈ ಎರಡೂ ನಕ್ಷತ್ರಗಳು ಈ ಹೋಮದಿಂದ ಸಂತುಷ್ಟಗೊಂಡು ಋಣ ಪರಿಹಾರ ರೂಪವಾದ ಸುಖವನ್ನು ದಯಪಾಲಿಸಲಿ. ಮೂರೂ ರೀತಿಯ ಋಣ ಬಂಧನದಲ್ಲಿರುವ ನನಗೆ, ಪಿತೃಗಳೇ ದೇವತೆಗಳಾಗಿರುವ ಈ ನಕ್ಷತ್ರಗಳ ಅನುಗ್ರಹವು ಋಣ ವಿಮೋಚನೆಗೆ ಉತ್ತಮವಾದ ಸಾಧನವಾಗಿದೆ.

4. **ವಿಜಿಹೀರ್ಷ್ವ ಲೋಕಾನ್ಕೃಧಿ ಬಂಧಾನ್ಮುಂಚಾಸಿ ಬದ್ಧಕಮ್ । ಯೋನೇರಿವ ಪ್ರಚ್ಯುತೋ ಗರ್ಭಃ ಸರ್ವಾನ್ಪಥೋ ಅನುಷ್ವ ॥**

ಋಷಿಯೊಬ್ಬರು ಸಾಲಗಾರನನ್ನು ಕುರಿತು ಹೇಳುತ್ತಾರೆ. ಎಲೈ ಅಧಮರ್ಣನೇ! (ಸಾಲಗಾರನೇ) **ವಿಜಿಹೀರ್ಷ್ವ**=ಸ್ವತಂತ್ರವಾಗಿ, ಸುಖವಾಗಿ ಸಂಚರಿಸುವುದ-ಕ್ಕೋಸ್ಕರ, **ಲೋಕಾನ್ಕೃಧಿ**=ಪುಣ್ಯಕರ್ಮಗಳ ಅನುಷ್ಠಾನದಿಂದ ಉತ್ತಮವಾದ ಲೋಕ-ವನ್ನು ಸಂಪಾದಿಸು, **ಬದ್ಧಕಂ**=ಋಣರೂಪವಾದ ಪಾಪದ ಪಾಶದಿಂದ ಬಂಧಿತ-ನಾದ ನಿನ್ನನ್ನು, **ಬಂಧಾನ್ಮುಂಚಾಸಿ**=ಋಣತ್ರಯ ರೂಪವಾದ ಬಂಧನದಿಂದ ಬಿಡಿಸಿಕೋ, ಬಂಧನದಿಂದ ಬಿಡುಗಡೆ ಹೇಗೆ ಎಂಬುದಕ್ಕೆ ದೃಷ್ಟಾಂತ=**ಯೋನೇಃ ಪ್ರಚ್ಯುತೋ ಗರ್ಭ ಇವ**=ತಾಯಿಯ ಗರ್ಭದಲ್ಲಿರುವ ಶಿಶುವು ಹೇಗೆ ಎಲ್ಲಾ ಅವಯವಗಳನ್ನು ಸಂಕೋಚ ಮಾಡಿಕೊಂಡು (ಮಡಿಚಿಕೊಂಡು) ಬಂಧಿಸಲ್ಪಟ್ಟಂತೆ ಇದ್ದು, ಪ್ರಸವದ ನಂತರದಲ್ಲಿ ಶರೀರದ ಎಲ್ಲಾ ಅವಯವಗಳನ್ನೂ ಯಥೇಷ್ಟವಾಗಿ

ಹರಡಿಕೊಳ್ಳಲು ಸಮರ್ಥವಾಗಿ ಬಂಧನದಿಂದ ಮುಕ್ತವಾದಂತೆ ಆಗುತ್ತದೆಯೋ ಹಾಗೆ.

**ತಾ.ಅ.** ಮಂತ್ರ ದೃಷ್ಟಾರರಾದ ಋಷಿಗಳೊಬ್ಬರು ಸಾಲಗಾರನನ್ನು ಕುರಿತು ಹೇಳುವ ಮಾತಿದು. ಸಾಲಗಾರನೇ! ಪಾರತಂತ್ರ್ಯವಿಲ್ಲದೇ ಸ್ವತಂತ್ರವಾಗಿ ಸುಖ-ವಾಗಿ ಸಂಚರಿಸುವುದೇ ವಿಹಾರ. ಹಾಗೆ ಸುಖವಾಗಿ ವಿಹರಿಸುವುದಕ್ಕೋಸ್ಕರವಾಗಿ ಪುಣ್ಯ ಕರ್ಮಗಳ ಅನುಷ್ಠಾನದಿಂದ ಉತ್ತಮವಾದ ಲೋಕವನ್ನು ಸಂಪಾದಿಸು. ಋಣತ್ರಯರೂಪವಾದ ಪಾಪದ ಪಾಶದಿಂದ ಬಂಧಿತನಾದ ನಿನ್ನನ್ನು ಬಿಡಿಸಿಕೋ.

ಯಾವ ರೀತಿಯ ಬಂಧನ ಹಾಗು ಸ್ವಾತಂತ್ರ್ಯವೆಂದರೆ- ತಾಯಿಯ ಗರ್ಭ-ದಲ್ಲಿರುವ ಮಗುವು ಶರೀರದ ಅವಯವಗಳನ್ನು ಸಂಕೋಚ ಮಾಡಿಕೊಂಡು (ಮಡಿಸಿಕೊಂಡು) ಯಥೇಷ್ಟವಾಗಿ ಅವಯವಗಳನ್ನು ಚಾಚಲು ಅಸಮರ್ಥವಾಗಿ ಬಂಧಿಸಲ್ಪಟ್ಟಂತೆ ಇರುತ್ತದೆ. ಹಾಗೂ ಪ್ರಸವದ ಅನಂತರ ಸ್ವತಂತ್ರವಾಗಿ ಕೈ ಕಾಲುಗಳನ್ನು ನೀಡಿಕೊಳ್ಳಲು ಸಮರ್ಥವಾಗಿ ಸ್ವಾತಂತ್ರ್ಯವನ್ನು ಹೊಂದಿ ಸುಖ-ವಾಗಿ ವಿಹರಿಸಲು ಅವಕಾಶವನ್ನು ಹೊಂದುತ್ತದೆ. ಆ ರೀತಿಯಲ್ಲಿ ಋಣ ಎಂಬ ಬಂಧನದಿಂದ ಮುಕ್ತನಾಗಿ ಸುಖವಾಗಿ ಸಂತೋಷದಿಂದ ವಿಹರಿಸುವಂತಹ ಸದವಕಾಶವನ್ನು ಹೊಂದುವವನಾಗು, ಋಣವೆಂಬುದು ಸರ್ವದಾ ಬಂಧನವೇ, ಅದನ್ನು ಪರಿಹರಿಸಿಕೊಳ್ಳದ ಹೊರತು ಸುಖ ಸಿಗಲಾರದು.

5. **ಸ ಪ್ರಜಾನನ್ಪ್ರತಿಗೃಭ್ಣೀತ ವಿದ್ವಾನ್ಪ್ರಜಾಪತಿಃ ಪ್ರಥಮಜಾ ಋತಸ್ಯ ।**
**ಅಸ್ಮಾಭಿರ್ದತ್ತಂ ಜರಸಃ ಪರಸ್ತಾದಚ್ಛಿನ್ನಂ ತಂತುಮನುಸಂಚರೇಮ ॥**

**ಸಃ**=ಪ್ರಜಾಪತಿ ದೇವತೆಯು, **ಅಸ್ಮಾಭಿರ್ದತ್ತಂ**=ನಮ್ಮಿಂದ ಸಮರ್ಪಿಸಲ್ಪಟ್ಟ ಹವಿಸ್ಸನ್ನು, **ಪ್ರತಿಗೃಭ್ಣೀತ**=ಸ್ವೀಕರಿಸಲಿ, ಹೇಗಿರುವ ಪ್ರಜಾಪತಿ ದೇವತೆಯೆಂದರೆ **ಋತಸ್ಯ ಪ್ರಥಮಜಾಃ**=ಸತ್ಯರೂಪನಾದ ಪರಬ್ರಹ್ಮನ ಮೊದಲನೇ ಮಗನು, ಹೇಗೆ, **ಪ್ರಜಾನನ್**=ನಮ್ಮ ಪ್ರಾರ್ಥನೆಯನ್ನು ಚೆನ್ನಾಗಿ ಕೇಳುತ್ತಾ, **ವಿದ್ವಾನ್**=ಎಲ್ಲಾ ವಿಷಯಗಳನ್ನೂ ತಿಳಿದ (ಸರ್ವಜ್ಞನಾದ) ಆ ಪ್ರಜಾಪತಿ ದೇವನ ಅನುಗ್ರಹದಿಂದ **ಜರಸಃ ಪರಸ್ತಾತ್**=ವೃದ್ಧಾಪ್ಯವನ್ನು ಕಳೆದ ಮೇಲೂ (ಇಹ ಯಾತ್ರೆಯ ನಂತರವೂ) **ಅಚ್ಛಿನ್ನಂ ತಂತುಂ**=ಅವಿಚ್ಛಿನ್ನವಾದ ಪುತ್ರ ಪೌತ್ರಾದಿ ಸಂತತಿಯನ್ನು **ಅನುಸಂಚರೇಮ**=ಪ್ರವೇಶಿಸಿ, ಪರಿಪೂರ್ತಿಯಾಗಿ ಋಣ ನಿರ್ಮುಕ್ತರಾಗಿ ಸುಖವಾಗಿ ಇರೋಣ.

ನಮ್ಮಿಂದ ಈ ಕೂಶ್ಮಾಂಡ ಹೋಮದಲ್ಲಿ ಸಮರ್ಪಿತವಾದ ಹವಿಸ್ಸನ್ನು ಪ್ರಜಾಪತಿ ದೇವತೆಯು ಸ್ವೀಕರಿಸಲಿ. ಸತ್ಯರೂಪನಾದ ಪರಬ್ರಹ್ಮನ ಮೊದಲನೇ ಮಗನಾಗಿದ್ದು, ನಮ್ಮ ಪ್ರಾರ್ಥನೆಯನ್ನು ಮನ್ನಿಸುವ, ಸರ್ವಜ್ಞನೂ, ಸರ್ವಶಕ್ತನೂ ಆದ ಆ ಪ್ರಜಾಪತಿ ದೇವತೆಯ ಅನುಗ್ರಹದಿಂದ ಜನ್ಮಾಂತರದಲ್ಲೂ, ನಾವು ನಮ್ಮ ಈ ಅವಿಚ್ಛಿನ್ನವಾದ ಪುತ್ರ-ಪೌತ್ರಾದಿ ಸಂತತಿಯನ್ನು ಪ್ರವೇಶಿಸುವವರಾಗಿ ಪೂರ್ಣರೂಪದಲ್ಲಿ ಋಣದಿಂದ ಮುಕ್ತಿಯನ್ನು ಹೊಂದಿ, ಶ್ರೇಷ್ಠವಾದ ಸುಖವನ್ನು ಹೊಂದೋಣ.

**6. ತ್ತತಂ ತಂತುಮನ್ವೇಕೇ ಅನು ಸಂಚರಂತಿ ಯೇಷಾಂ ದತ್ತಂ ಪಿತ್ರ್ಯಮಾಯನವತ್।**
**ಅಬಂಧ್ವೇಕೇ ದದತಃ ಪ್ರಯಚ್ಛಾದ್ದಾತುಂ ಚೇಚ್ಛಕ್ನವಾನ್‌ ಸ ಸ್ವರ್ಗ ಏಷಾಮ್ ॥**

**ಏಕೇ**=ಕೆಲವರು, **ತತಂ**=ಪುತ್ರ-ಪೌತ್ರಾದಿ ರೂಪದಿಂದ ವಿಶಾಲವಾಗಿ ಹರಡಿದ. **ತಂತುಮನು**=ತಮ್ಮ ಪೀಳಿಗೆ(ಸಂತತಿ)ಯನ್ನು ಪ್ರವೇಶಿಸಿ, **ಅನುಸಂಚರಂತಿ**= ಪುಣ್ಯಲೋಕವನ್ನು ಕ್ರಮವಾಗಿ ಹೊಂದುತ್ತಾರೆ. ಪುತ್ರರೂಪದಲ್ಲಿ ಹಾಗೂ ಆತ್ಮ (ತನ್ನ ರೂಪ) ರೂಪದಲ್ಲಿ ಹೀಗೆ ಎರಡು ರೂಪವಾದ ಶರೀರ ಸಂಬಂಧ ಉಂಟಾಗುತ್ತದೆ. ಅವುಗಳಲ್ಲಿ ಪುತ್ರರೂಪದಿಂದ ಲೋಕದಲ್ಲಿ ಪುಣ್ಯಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಪಿತೃರೂಪದಿಂದ ಲೋಕಾಂತರದಲ್ಲಿ (ಪಿತೃಲೋಕದಲ್ಲಿ) ಸಂಚರಿಸುತ್ತಾನೆ. ಆದ್ದರಿಂದ ಏಕಕಾಲದಲ್ಲಿ ಆಕಾರ ಬೇಧದಿಂದ ತನ್ನ ವಂಶಪರಂಪರೆಯನ್ನು ಪ್ರವೇಶಿಸುತ್ತಾನೆ. ಹಾಗು ಪುಣ್ಯ ಲೋಕದಲ್ಲಿ ಸುಖವನ್ನು ಅನುಭವಿಸುತ್ತಾನೆ, ಎಂಬುದು ಸಮನ್ವಯವಾಗುತ್ತದೆ. **ಯೇಷಾಂ**=ಯಾರು **ಪಿತ್ರ್ಯಂ ಋಣಂ ಆಯನವತ್ ದತ್ತಂ**=ಮೂರೂ ರೀತಿಯ ಋಣಗಳನ್ನೂ (''ಪಿತ್ರ್ಯ'' ಶಬ್ದದಿಂದ ಮೂರೂ ರೀತಿಯ ಋಣಗಳೂ ಉಪಲಕ್ಷಿತವಾಗುತ್ತವೆ). ಶಾಸ್ತ್ರವಿಹಿತವಾದ ರೀತಿಯಲ್ಲಿ ತೀರಿಸಿದ್ದಾರೋ, ಅವರು ಪಿತೃಲೋಕದಲ್ಲಿ ಸುಖವನ್ನು ಅನುಭವಿಸುತ್ತಾರೆ. **ಏಕೇ**=ಇನ್ನೂ ಕೆಲವರು **ಅಬಂಧು**=ಪುತ್ರ-ಪೌತ್ರಾದಿ ಬಾಂಧವರನ್ನು ಹೊಂದಿರದೆ ಪಿತೃಋಣವನ್ನು ಪರಿಹರಿಸಿಕೊಳ್ಳಲು ಅಶಕ್ತರಾಗಿದ್ದರೂ, **ದದತಃ**=ಸಾಲ ಕೊಟ್ಟವರಿಗೆ ಆ ಸಾಲದ ಹಣವನ್ನು ತಿರುಗಿ-ಕೊಡುವ ಇಚ್ಛೆಯುಳ್ಳವರಾಗಿದ್ದು, **ಪ್ರಯಚ್ಛತ್**=ಆ ಸಾಲವನ್ನು ಹಿಂದಿರುಗಿಸುತ್ತಾರೋ, ಅವರು **ದಾತುಂ ಶಕ್ನವಾನ್**=ಹಿಂದಿರುಗಿಸಲು ಸಮರ್ಥರಾಗಿದ್ದರಿಂದ **ಏಷಾಂ ಸ ಸ್ವರ್ಗ**=ಅವರಿಗೆ ಆ ಸ್ವರ್ಗ (ಪಿತೃಲೋಕ) ಸಿಗುತ್ತದೆ.

ಲೋಕದಲ್ಲಿ ಕೆಲವರು ಪುತ್ರ ಪೌತ್ರಾದಿ ರೂಪದಿಂದ ವಿಶಾಲವಾಗಿ ಹರಡಿದ ತಮ್ಮ ಪೀಳಿಗೆ (ಸಂತತಿ)ಯನ್ನು ಪ್ರವೇಶಿಸಿ, ಪುಣ್ಯಲೋಕವನ್ನು ಅನುಕ್ರಮವಾಗಿ ಹೊಂದುತ್ತಾರೆ. ಮನುಷ್ಯನಿಗೆ ಪುತ್ರರೂಪದಲ್ಲಿ ಹಾಗು ಪಿತೃರೂಪದಲ್ಲಿ ಹೀಗೆ ಎರಡು ರೂಪದಲ್ಲಿ ಶರೀರ ಸಂಬಂಧವುಂಟಾಗುತ್ತದೆ. ಅವುಗಳಲ್ಲಿ ಒಂದಾದ ಪುತ್ರರೂಪದಿಂದ ಲೋಕದಲ್ಲಿ ಪುಣ್ಯಕಾರ್ಯವನ್ನು ಮಾಡುತ್ತಲೇ ಇರುತ್ತಾನೆ. ಪಿತೃರೂಪದಲ್ಲಿ ಪಿತೃಲೋಕದಲ್ಲಿ ಸುಖವನ್ನು ಅನುಭವಿಸುತ್ತಾನೆ. ಹೀಗೆ ಆಕಾರ ಭೇದವನ್ನು ಹೊಂದಿರುವುದರಿಂದ, ಒಂದೇ ಕಾಲದಲ್ಲಿ ಈ ಲೋಕದಲ್ಲಿ ಪುಣ್ಯ ಕರ್ಮವನ್ನು ಅನುಷ್ಠಾನ ಮಾಡುವುದು ಮತ್ತು ಪಿತೃಲೋಕದಲ್ಲಿ ಸುಖವನ್ನು ಅನುಭವಿಸುವುದು ಎಂಬುದು ಸಮನ್ವಯವಾಗುತ್ತದೆ. ಯಾರು ಮೂರೂ ರೀತಿಯ ಋಣಗಳನ್ನು ಶಾಸ್ತ್ರದಲ್ಲಿ ತಿಳಿಸಿದಂತೆ ವಿಧಿವತ್ತಾಗಿ ತೀರಿಸುತ್ತಾರೋ, ಅವರು ಪಿತೃಲೋಕದಲ್ಲಿ ಸುಖವನ್ನು ಅನುಭವಿಸುತ್ತಾರೆ. ಇನ್ನು ಕೆಲವರು ಪುತ್ರ-ಪೌತ್ರಾದಿ ಸಂತತಿಯನ್ನು ಹೊಂದಿರದೆ ಪಿತೃಋಣವನ್ನು ತೀರಿಸಲು ಸಮರ್ಥರಾಗಿರದಿದ್ದರೂ, ತೆಗೆದುಕೊಂಡ ಸಾಲವನ್ನು ಸಾಲಕೊಟ್ಟವರಿಗೆ ಹಿಂದಿರುಗಿ ಕೊಡಲು ಸಮರ್ಥರಾಗಿದ್ದುಕೊಂಡು ಹಿಂದಿರುಗಿಸುವುದರ ಮೂಲಕ ಅವರೂ ಪಿತೃಲೋಕವನ್ನು ಅನುಭವಿಸುತ್ತಾರೆ. ಪುತ್ರ-ಪೌತ್ರಾದಿ ಸಂತತಿ ಭಾಗ್ಯವು ದೈವಾಧೀನವಾಗಿದ್ದರೂ, ತೆಗೆದುಕೊಂಡ ಸಾಲವನ್ನು ಅಥವಾ ಹೊಂದಿದಂತಹ ಋಣವನ್ನು ಪ್ರತ್ಯರ್ಪಿಸಲೇ ಬೇಕು. ಆದರಿಂದಲೇ ಋಣಗಳೆಲ್ಲ ಪರಿಹಾರವಾಗಿ ಪಿತೃಲೋಕಪ್ರಾಪ್ತಿ ಉಂಟಾಗುತ್ತದೆ.

7. **ಆರಭೇಥಾಮನು ಸꣳ ರಭೇಥಾꣳ ಸಮಾನಂ ಪಂಥಾಮವಥೋ ಘೃತೇನ । ಯದ್ವಾಂ ಪೂರ್ತಂ ಪರಿವಿಷ್ಟಂ ಯದಗ್ನೌ ತಸ್ಮೈ ಗೋತ್ರಾಯೇಹ ಜಾಯಾಪತೀ ಸꣳರಭೇಥಾಮ್ ॥**

**ಜಾಯಾಪತೀ**=ಕರ್ಮಾಧಿಕಾರಿಗಳಾದ ದಂಪತಿಗಳೇ! ಈ ಜನ್ಮದಲ್ಲಿ, **ಘೃತೇನ**= ತುಪ್ಪದಿಂದ ಅಥವಾ ಹವನೀಯ ದ್ರವ್ಯವಾದ ಹವಿಸ್ಸಿನಿಂದ, **ಆರಭೇಥಾಂ**= ಕರ್ಮಾರಂಭವನ್ನು ಮಾಡಿ, **ಅನುಸಂರಬೇಥಾಂ**=ನೀವಿಬ್ಬರೂ ಪರಸ್ಪರ ಅನುಕೂಲ- ರಾಗಿದ್ದು, ಸೌಮನಸ್ಯದಿಂದ ಇರಿ. ನಿಮ್ಮಿಬ್ಬರ, **ಸಮಾನಂ ಪಂಥಾಂ**=ಒಂದೇ ಗುರಿಯಾದ ಪುಣ್ಯಲೋಕದ ಮಾರ್ಗವನ್ನು, **ಅವಥೋ**=ರಕ್ಷಿಸಿಕೊಳ್ಳಿ. **ವಾಂ**= ನಿಮ್ಮಿಬ್ಬರಿಂದ **ಯತ್ಪೂರ್ತಂ**=ಪಿತೃಗಳಿಗೆ ಸಮರ್ಪಿಸಿದ ಅನ್ನಾದಿಗಳು, ಮತ್ತು

**ಯದಗ್ನೌ ಪರಿವಿಷ್ಟಂ**=ಅಗ್ನಿಯಲ್ಲಿ ಸಮರ್ಪಿಸಿದ ಹವಿಸ್ಸು, **ತಸ್ಮೈ**=ಇವು ಅವಿಚ್ಛಿನ್ನ-ವಾಗಿ ನಡೆಯುವಂತೆ, **ಸಂರಭೇಥಾಂ**=ಶೀಘ್ರವಾಗಿ ಕಾರ್ಯ ಪ್ರವೃತ್ತರಾಗಿರಿ. ಅದು, **ಗೋತ್ರಾಯ**=ಗೋತ್ರಾಭಿವೃದ್ಧಿಗೆ ಉಪಯುಕ್ತವಾದದ್ದು. ಗೋತ್ರದಲ್ಲಿ ಹುಟ್ಟಿದ ಹಿಂದಿನ ಹಾಗೂ ಮುಂದಿನವರಿಗೂ ಸಹ ಇದು ಶ್ರೇಯಸ್ಕರವಾದದ್ದು.

ಯಾಗಾದಿ ವೈದಿಕ ಕಾರ್ಯಗಳಿಗೆ ಅಧಿಕಾರಿಗಳಾದ ದಂಪತಿಗಳೇ! ನೀವು ಆಜ್ಯವೇ ಮೊದಲಾದ ಹವಿಸ್ಸುಗಳಿಂದ ವೇದ ವಿಹಿತವಾದ ಯಜ್ಞ-ಯಾಗಾದಿ ಕರ್ಮಗಳನ್ನು ಆರಂಭಿಸಿ ನೀವಿಬ್ಬರೂ ಪರಸ್ಪರ ಅನುಕೂಲಕರವಾಗಿದ್ದು, ಸೌಮನಸ್ಯದಿಂದ ಬಾಳಿರಿ. ಪುಣ್ಯಲೋಕ ಹೊಂದುವುದನ್ನೇ ಗುರಿಯನ್ನಾಗಿ ನೀವಿಬ್ಬರೂ ಹೊಂದಿರುವುದರಿಂದ ಆ ಮಾರ್ಗವನ್ನು ಅನುಸರಿಸಿರಿ. ನೀವು ಪಿತೃ-ಗಳಿಗೆ ಅನ್ನಾದಿಗಳನ್ನೂ ಅಗ್ನಿಯಲ್ಲಿ ಹವಿಸ್ಸುಗಳನ್ನೂ ಶ್ರದ್ಧೆಯಿಂದ ಸಮರ್ಪಿಸು-ವಂತೆ, ಈ ಪರಂಪರೆ ನಿಮ್ಮ ಸಂತತಿಯಲ್ಲಿ ಅವಿಚ್ಛಿನ್ನವಾಗಿ ನಡೆಯುವಂತೆ ಬೆಳೆಸಿಕೊಂಡು ಉಳಿಸಿಕೊಂಡು ಬನ್ನಿ. ಇದು ಸಂತತಿಯ (ಗೋತ್ರ) ಅವಿಚ್ಛಿನ್ನ-ವಾದ ಪರಂಪರೆ ಮುಂದುವರೆಯುವುದಕ್ಕೆ ಉಪಯುಕ್ತವಾದದ್ದು.

**8. ಯದ್ದಂತರಿಕ್ಷಂ ಪೃಥಿವೀಮುತ ದ್ಯಾಂ ಯನ್ಮಾತರಂ ಪಿತರಂ ವಾ ಜಿಹಿಂಸಿಮ ।**
**ಅಗ್ನಿರ್ಮಾತಸ್ಮಾದೇನಸೋ ಗಾರ್ಹಪತ್ಯ ಉನ್ನೋನೇಷದ್ದುರಿತಾಯಾನಿ ಚಕೃಮ ॥**

**ಅಂತರಿಕ್ಷಂ ಜಿಹಿಂ ಸಿಮ**=ನಾವು ಆಕಾಶವನ್ನು ಹಿಂಸಿಸಿದ್ದರೆ, ಅದರಿಂದುಂಟಾದ ಪಾಪವು **ಉತಾಪಿ**=ಮತ್ತು, **ದ್ಯಾಂ**=ದೇವಲೋಕದಲ್ಲಿರುವ ದೇವತೆಗಳಿಗೆ ಅಪಚಾರವೆಸಗಿದ್ದರೆ ಅದರಿಂದುಂಟಾದ ಪಾಪವು ಯಾವುದಿದೆಯೋ ಹಾಗೂ **ಪೃಥಿವೀಂ**=ಪೃಥಿವಿಯಲ್ಲಿರುವ ಪ್ರಾಣಿಗಳನ್ನು ಹಿಂಸಿಸಿದ್ದರೆ, ಅದರಿಂದುಂಟಾದ ಪಾಪವು, ಯಾವುದಿದೆಯೋ, ಹೀಗೆ ಮೂರು ಲೋಕದಲ್ಲಿರುವ ಪ್ರಾಣಿಗಳ ಅಪಚಾರ ಅಥವಾ ಹಿಂಸೆ ಹಾಗೂ, **ಮಾತರಂ ಪಿತರಂ ವಾ ಜಿಹಿಂ ಸಿಮ**=ತಂದೆ ತಾಯಿಗಳಿಗೆ ಪೀಡಿಸುವಿಕೆಯಿಂದುಂಟಾದ ಪಾಪ ಯಾವುದಿದೆಯೋ, **ತಸ್ಮಾತ್ ಏನಸಃ**=ಆ ಎಲ್ಲಾ ಬಗೆಯ ಪಾಪಗಳಿಂದ, **ನೋ**=ನಮ್ಮನ್ನು, **ಗಾರ್ಹಪತ್ಯಃ ಅಗ್ನಿಃ**=ಯಜಮಾನ ಸಂಬಂಧಿಯಾದ ಅಗ್ನಿದೇವನು, **ಉನ್ನೋನೇಷತ್**=ಮೇಲಕ್ಕೆತ್ತಲಿ, ಪಾಪವನ್ನು ನಾಶ ಮಾಡಿ ರಕ್ಷಿಸಲಿ. **ಯಾನಿ ದುರಿತಾನಿ ಚಕೃಮ**=ಇನ್ನೂ ಬೇರೆ ಪಾಪಗಳು ಇದ್ದರೂ ಅವುಗಳನ್ನೂ ಸಹ ನಾಶಮಾಡಲಿ.

ನಾವು ಆಕಾಶದಲ್ಲಿರುವ ಪ್ರಾಣಿಗಳನ್ನು ಹಿಂಸಿಸಿದ್ದರೆ, ಪೃಥಿವಿಯಲ್ಲಿರುವ ಪ್ರಾಣಿ ಜಂತುಗಳನ್ನು ಹಿಂಸಿಸಿದ್ದರೆ, ಹಾಗೂ ದೇವಲೋಕದಲ್ಲಿರುವ ದೇವತೆಗಳಿಗೆ ಅಪಚಾರವೆಸಗಿದ್ದರೆ, ಈ ಮೂರೂ ರೀತಿಯ ದುಷ್ಕೃತ್ಯದಿಂದ ಉಂಟಾದ ಪಾಪಗಳನ್ನು ಹಾಗೂ ತಂದೆ ತಾಯಿಗಳನ್ನು ಹಿಂಸಿಸಿದ್ದರೆ ಅದರಿಂದುಂಟಾದ ಪಾಪವನ್ನೂ ಮತ್ತು ಬೇರೆ ಯಾವುದಾದರೂ ಪಾಪ ಶೇಷವಿದ್ದರೆ ಈ ಎಲ್ಲಾ ರೀತಿಯ ಪಾಪಗಳನ್ನೂ ಗೃಹಪತಿಯಾದ (ಯಜಮಾನ ಸಂಬಂಧಿ) ಅಗ್ನಿದೇವನು ನಾಶಮಾಡಿ ನಮ್ಮನ್ನು ಪಾಪ ನಿರ್ಮುಕ್ತನನ್ನಾಗಿಸಲಿ.

9. **ಭೂಮಿರ್ಮಾತಾऽದಿತಿರ್ನೋ ಜನಿತ್ರಂ ಭ್ರಾತಾಂऽತರಿಕ್ಷಮಭಿಶಸ್ತ್ಯ ಏನಃ । ದ್ಯೌರ್ನಃ ಪಿತಾ ಪಿತ್ರ್ಯಾಚ್ಛಂಭವಾಸಿ ಜಾಮಿ ಮಿತ್ವಾ ಮಾ ವಿವಿತ್ಸಿ ಲ್ಲೋಕಾತ್ ॥**

**ಭೂಮಿಃ**=ಭೂದೇವಿಯು, **ನೋ ಮಾತಾ**=ನಮ್ಮ ತಾಯಿಯಾಗಿದ್ದಾಳೆ, ಎಲ್ಲಾ ಜೀವ ಜಂತುಗಳ ಜನನಿ. **ಅದಿತಿಃ**=ಅದಿತಿ ದೇವಿಯು, **ಜನಿತ್ರಂ**=ತಾಯಿಯ ಸ್ಥಾನದಲ್ಲಿದ್ದವಳು, ಭೂಮಿಯು ಅಚೇತನವಾಗಿದ್ದರಿಂದ ಎಲ್ಲಾ ಜೀವಿಗಳಿಗೂ ಆಶ್ರಯಳಾಗಿದ್ದಾಳೆ. (ನಿವಾಸಾಶ್ರಯ) ಅದರ ಅಭಿಮಾನಿನೀ ದೇವತೆಯೇ ಅದಿತಿ. ಹಾಗಾಗಿ ಅವಳೂ ಮಾತೃಸ್ಥಾನೀಯಳು. **ಅಂತರಿಕ್ಷಂ**=ಆಕಾಶವು **ಭ್ರಾತಾ**=ಸಹೋದರನ ಸ್ಥಾನದಲ್ಲಿದೆ. **ಯದೇನೋ**=ಯಾವ ಪಾಪವು ನಮ್ಮಿಂದ ಮಾಡಲ್ಪಟ್ಟಿದೆಯೋ, ಆ ಪಾಪವು, **ಅಭಿಶಸ್ತಿಃ**=ಶತ್ರು ರೂಪವಾಗಿದ್ದು **ದ್ಯೌಃ ನಃ ಪಿತಾ**=ದ್ಯುಲೋಕವು (ದೇವಲೋಕವು) ನಮ್ಮ ಪಿತೃಸ್ಥಾನೀಯವಾದದ್ದು. ಪರಮೇಶ್ವರನಿಂದ ಅನುಗೃಹೀತವಾದದ್ದು ಈ ಬಂಧು ವರ್ಗ. ಆದ್ದರಿಂದ, ಎಲೈ ಯಜಮಾನನೇ! ಆ ಬಂಧು ವರ್ಗವನ್ನು ಸಂಪಾದಿಸಲು ನೀನು, **ಪಿತ್ರ್ಯಾತ್**=ಪಿತೃತ್ವವನ್ನು ಅಪೇಕ್ಷೆ ಪಡು. **ಶಂ ಭವಾಸಿ**=ಅದರಿಂದ ಸುಖವನ್ನು ಹೊಂದುತ್ತೀಯಾ. ಇಹ ಮತ್ತು ಪರಗಳ ಸುಖವನ್ನು ಹೊಂದಲು ಸಂತತಿಯನ್ನು ಪಡೆ. **ಜಾಮಿ ಮಿತ್ವಾ**=ಆಲಸ್ಯಾದಿಗಳಿಂದ ಪುತ್ರಾದಿ ಸಂತತಿಯನ್ನು ಹೊಂದದೆ ಮರಣ ಹೊಂದಿದರೆ, **ಲೋಕಾನ್**=ಪುಣ್ಯ ಲೋಕವನ್ನು, ಋಣತ್ರಯಗಳಿಂದ ಮುಕ್ತರಾದವರು ಹೊಂದುವ ಪುಣ್ಯ ಲೋಕವನ್ನು **ಮಾ ವಿವಿತ್ಸಿ**=ಹೊಂದಲಾರೆ.

ಭೂದೇವಿಯು ನಮ್ಮ ತಾಯಿಯಾಗಿದ್ದಾಳೆ. ಎಲ್ಲಾ ಜೀವ ಜಂತುಗಳಿಗೆ ನಿವಾಸದ ಆಶ್ರಯವಾಗಿ ಜನನಿಯ ಸ್ಥಾನದಲ್ಲಿದ್ದಾಳೆ. ಭೂ ದೇವಿಯ ಅಭಿಮಾನಿ

ದೇವತೆಯಾದ ಅದಿತಿ ದೇವಿಯೂ ತಾಯಿಯ ಸ್ಥಾನದಲ್ಲಿದ್ದಾಳೆ. ಭೂ ದೇವಿಯು ಅಚೇತನವಾಗಿದ್ದು ಸಕಲಕ್ಕೂ ಆಶ್ರಯರೂಪದಲ್ಲಿದ್ದು ತಾಯಿಯಾದರೆ, ಅದಿತಿ ಮಾತೆಯು ಭೂಮಿಯ ಅಭಿಮಾನಿ ದೇವತೆಯಾಗಿದ್ದು ಮಾತೃಸ್ಥಾನದಲ್ಲಿದ್ದಾಳೆ. ಆಕಾಶವು ಸಹೋದರರ ಸ್ಥಾನದಲ್ಲಿದೆ. ನಮ್ಮಿಂದ ಮಾಡಲ್ಪಟ್ಟ ಪಾಪವು ಶತ್ರು ಸ್ಥಾನದಲ್ಲಿದೆ. ದೇವಲೋಕವು ನಮ್ಮ ಪಿತೃಸ್ಥಾನದಲ್ಲಿದೆ. ಪರಮೇಶ್ವರನ ಅನುಗ್ರಹದಿಂದ ಪ್ರಾಪ್ತವಾದದ್ದು ಈ ಬಂಧುವರ್ಗ. ಹಾಗಾಗಿ ಯಜಮಾನನೇ! ಆ ಬಂಧುವರ್ಗವನ್ನು ಹೊಂದಲು ಪಿತೃತ್ವವನ್ನು ಅಪೇಕ್ಷೆ ಪಡು. ಆ ದಿಶೆಯಲ್ಲಿ ಸತ್ಕಾರ್ಯವನ್ನು ಕೈಗೊಳ್ಳು. ಆದರಿಂದ ನೀನು ಸುಖವನ್ನು ಹೊಂದುತ್ತೀಯ. ಇಹ ಪರಗಳ ಸುಖವನ್ನು ಪಡೆಯಲು ಸಂತತಿಯನ್ನು ಹೊಂದು. ಆಲಸ್ಯಾದಿಗಳಿಂದ ಸಂತತಿಯನ್ನು ಹೊಂದದೆ ಇಹವನ್ನು ತ್ಯಜಿಸಿದರೆ ಮೂರೂ ರೀತಿಯ ಋಣ-ಗಳಿಂದ ಮುಕ್ತರಾದವರು ಹೊಂದುವ ಪುಣ್ಯಲೋಕವನ್ನು ಹೊಂದಲಾರೆ.

**10. ಯತ್ರ ಸುಹಾರ್ದಃ ಸುಕೃತೋ ಮದಂತೇ ವಿಹಾಯ ರೋಗಂ ತನ್ವಾ೩೯ ಸ್ವಾಯಾಮ್ । ಅಶ್ಲೋಣಾಂಗೈರಹ್ರುತಾಃ ಸ್ವರ್ಗೇ ತತ್ರ ಪಶ್ಯೇಮ ಪಿತರಂ ಚ ಪುತ್ರಮ್ ॥**

**ಯತ್ರ**=ಯಾವ ಪುಣ್ಯಲೋಕದಲ್ಲಿ ಇರುವ, **ಸುಹಾರ್ದ**=ಉತ್ತಮವಾದ ಹೃದಯವಂತಿಕೆಯುಳ್ಳ, **ಸುಕೃತಃ**=ಪುಣ್ಯಕರ್ಮವನ್ನು ಅನುಷ್ಠಾನ ಮಾಡಿದವರು, **ಸ್ವಾಯಾಮ್-ತನ್ವಾಂ**=ತಮ್ಮ ಶರೀರದಲ್ಲಿ, **ರೋಗಂ ವಿಹಾಯ**=ರೋಗಗಳನ್ನು ಪರಿತ್ಯಜಿಸಿ, **ಮದಂತೇ**=ಸಂತೋಷಿಸುತ್ತಾರೆ. **ಅಶ್ಲೋಣಾಂಗೈಃ**=ನೀರೋಗಿ-ಗಳಾಗಿದ್ದು, **ಅಹ್ರುತಾಃ**=ಕುಟಿಲ ಸ್ವಭಾವ ರಹಿತರಾಗಿ, ಸರಳವಾದ ಸ್ವಭಾವ ಹೊಂದಿದ, ಯಾವುದರಿಂದಲೂ ವಂಚಿತರಾಗದೆ, ನಾವೆಲ್ಲರೂ, **ತತ್ರ ಸ್ವರ್ಗೇ**=ಆ ಸ್ವರ್ಗದಲ್ಲಿ ಇದ್ದು, **ಪಿತರಂ ಪುತ್ರಂ ಚ ಪಶ್ಯೇಮ**=ಅಲ್ಲಿ ಸುಖವನ್ನು ಅನುಭವಿಸುವ ಪಿತೃಗಳನ್ನೂ, ಇಲ್ಲಿ ಪುತ್ರರನ್ನೂ ನೋಡೋಣ. ಅಂತಹ ಶ್ರೇಷ್ಠ ಜನ್ಮ ಲಭಿಸಲಿ.

ಪುಣ್ಯಲೋಕ(ಪಿತೃಲೋಕ)ದಲ್ಲಿರುವ ಉತ್ತಮ ಹೃದಯವಂತಿಕೆಯನ್ನು ಹೊಂದಿದ, ಪುಣ್ಯ ಕರ್ಮಗಳನ್ನು ಅನುಷ್ಠಾನ ಮಾಡಿದವರು, ತಮ್ಮ ಶರೀರದಲ್ಲಿ ರೋಗಗಳನ್ನು ಪರಿತ್ಯಜಿಸಿ ಸಂತೋಷಿಸುತ್ತಾರೆ. ನೀರೋಗಿಗಳಾಗಿದ್ದು, ಅತ್ಯಂತ ಮೃದು ಮತ್ತು ಸರಳ ಸ್ವಭಾವ ಹೊಂದಿ ಯಾವುದರಿಂದಲೂ ವಂಚಿತರಾಗದೆ,

ನಾವೆಲ್ಲರೂ, ಆ ಸ್ವರ್ಗದಲ್ಲಿದ್ದು, ಅಲ್ಲಿ ಸುಖವನ್ನು ಅನುಭವಿಸುವ ಪಿತೃಗಳನ್ನೂ, ಇಲ್ಲಿರುವ ಪುತ್ರರನ್ನೂ ನೋಡೋಣ. ಅಂತಹ ಶ್ರೇಷ್ಠವಾದ ಜನ್ಮ ಲಭಿಸುವಂತೆ ಅನುಗ್ರಹಿಸು.

11. **ಯದನ್ನಮದ್ಮ್ಯನೃತೇನ ದೇವಾ ದ್ದಾಸ್ಯನ್ನದಾಸ್ಯನ್ನುತ ವಾಽಕರಿಷ್ಯನ್ । ಯದ್ದೇವಾನಾಂ ಚಕ್ಷುಷ್ಯಾಗೋ ಅಸ್ತಿ ಯದ್ದೇವ ಕಿಂಚ ಪ್ರತಿಜಗ್ರಾಹ-ಮಗ್ನಿರ್ಮಾ ತಸ್ಮಾದನೃಣಂ ಕೃಣೋತು ॥**

**ದೇವಾಃ**=ದೇವತೆಗಳೇ! ನಾನು, **ದಾಸ್ಯನ್ನದಾಸ್ಯನ್**=ತೆಗೆದುಕೊಂಡ ಸಾಲವನ್ನು (ಋಣ) ಹಿಂದಿರುಗಿಸುವ ಇಚ್ಛೆಯುಳ್ಳವನಾಗಿ, ಅಥವಾ ಹಿಂದಿರುಗಿಸುವ ಅಪೇಕ್ಷೆಯನ್ನು ಹೊಂದದೆ, ತಾತ್ಕಾಲಿಕವಾಗಿ ''ಖಂಡಿತವಾಗಿಯೂ ಹಿಂದಿರುಗಿ-ಸುತ್ತೇನೆ'' ಎಂಬ, **ಅನೃತ ವಚನೇನ**=ಸುಳ್ಳು ವಿಶ್ವಾಸವನ್ನು ತೋರಿಸಿ, ಹಣವನ್ನು (ಸಾಲ) ತೆಗೆದುಕೊಂಡು **ಯದನ್ನಮದ್ಮಿ**=ತಿಂದು ಹಾಕಿದ್ದೇನೋ, ಅಥವಾ ಬೇರೆ-ಯವರ ಕೆಲಸವನ್ನು ಮಾಡಿ ಕೊಡುತ್ತೇನೆ ಎಂದು ಸುಳ್ಳು ಮಾತಿನಿಂದ ವಂಚಿಸಿ, ಹಣವನ್ನು ತೆಗೆದುಕೊಂಡು **ಅಕರಿಷ್ಯನ್ ಯದನ್ನಮದ್ಮಿ**=ಆ ಕೆಲಸವನ್ನು ಮಾಡದೆ, ಆ ಹಣವನ್ನು ತಿಂದು ತೇಗಿದ್ದೇನೋ, **ಯತ್**=ಮತ್ತು, **ದೇವಾನಾಂ ಚಕ್ಷುಷೀ**= ದೇವತೆಗಳ ಎದುರಿಗೆ ನನ್ನಿಂದ ಮಾಡಲ್ಪಟ್ಟ, **ಅಗಃ**=ಸೂರ್ಯನಿಗೆ ಎದುರಿಗೆ ನಿಂತು ಮೂತ್ರ ವಿಸರ್ಜನಾದಿ ಪಾಪವು ಯಾವುದಿದೆಯೋ, **ಕಿಂಚ ಯದೇವ**= ಶೂದ್ರಾದಿಗಳಿಂದ ಹಣವನ್ನು, **ಪ್ರತಿಜಗ್ರಾಹಂ**=ಪ್ರತಿಗ್ರಹವನ್ನು ಮಾಡಿದ್ದೇನೋ, **ತಸ್ಮಾತ್**=ಈ ಎಲ್ಲಾ ರೀತಿಯ ಪಾಪಗಳಿಂದ ಬಿಡಿಸಿ, **ಮಾಂ**=ನನ್ನನ್ನು **ಅಗ್ನಿಃ ಅನೃಣಂ ಕರೋತು**=ಅಗ್ನಿದೇವನು ಋಣ ಮುಕ್ತನನ್ನಾಗಿಸಲಿ.

ದೇವತೆಗಳೇ! ನಾನು ತೆಗೆದುಕೊಂಡ ಸಾಲವನ್ನು ಹಿಂದಿರುಗಿ ಕೊಡುವ ಇಚ್ಛೆಯುಳ್ಳವನಾಗಿ ಅಥವಾ ಹಿಂದಿರುಗಿಸುವ ಬಯಕೆ ಇಲ್ಲದವನಾಗಿ, ಖಂಡಿತ-ವಾಗಿಯೂ ಹಿಂದಿರುಗಿಸುತ್ತೇನೆ ಎಂಬ ಸುಳ್ಳು ಮಾತಿನಿಂದ ವಂಚಿಸಿ, ಸಾಲವನ್ನು ತೆಗೆದುಕೊಂಡು ತಿಂದು ಹಾಕಿದ್ದೇನೋ, ಅಥವಾ ಬೇರೆಯವರ ಯಾವುದೋ ಒಂದು ಕೆಲಸವನ್ನು ಮಾಡಿಕೊಡುತ್ತೇನೆ ಎಂದು ಸುಳ್ಳಾಗಿ ವಿಶ್ವಾಸ ತೋರಿಸಿ, ಮೋಸ ಮಾಡಿ ಹಣವನ್ನು ಪಡೆದು, ಆ ಕೆಲಸವನ್ನು ಮಾಡಿಕೊಡದೆ ಹಣವನ್ನು ನುಂಗಿ ಹಾಕಿದ್ದೇನೋ, ಹಾಗೂ ದೇವತೆಗಳ ಎದುರಿನಲ್ಲೇ ಪಾಪ ಕಾರ್ಯವನ್ನು ಎಸಗಿದ್ದೇನೋ, ಅಂದರೆ ಸೂರ್ಯನ ಸಮ್ಮುಖದಲ್ಲಿ ಅವನಿಗೆ ಅಭಿಮುಖವಾಗಿ ಮೂತ್ರ ವಿಸರ್ಜನಾದಿ ಪಾಪವು ಯಾವುದಿದೆಯೋ, ಹಾಗೂ ಶೂದ್ರಾದಿಗಳಿಂದ

ಪ್ರತಿಗ್ರಹ (ಅಸತ್ಪ್ರತಿಗ್ರಹ) ಮಾಡಿದ ದೋಷದಿಂದುಂಟಾದ ಪಾಪವು ಯಾವುದಿದೆಯೋ, ಆ ಎಲ್ಲಾ ರೀತಿಯ ಪಾಪಗಳನ್ನೂ ಸಹ ನಾಶ ಮಾಡಿ ಅಗ್ನಿದೇವನು ನನ್ನನ್ನು ಋಣ ಮುಕ್ತನನ್ನಾಗಿಸಿ ಅನುಗ್ರಹಿಸಲಿ.

**12. ಯದನ್ನಮದ್ಮಿ ಬಹುಧಾ ವಿರೂಪಂ ವಾಸೋ ಹಿರಣ್ಯಮುತ ಗಾಮು ಜಾಮವಿಮ್ । ಯದ್ದೇವಾನಾಂ ಚಕ್ಷುಷ್ಯಾಗೋ ಅಸ್ತಿ ಯದ್ದೇವ ಕಿಂಚ ಪ್ರತಿಜಗ್ರಾಹಮಗ್ನಿರ್ಮಾ ತಸ್ಮಾದನೃಣಂ ಕೃಣೋತು ॥**

**ಬಹುಧಾ ವಿರೂಪಂ**=ದ್ರವ್ಯದೋಷ, ಕರ್ತೃ ದೋಷ, ದೇಶಕಾಲಾದಿ ದೋಷಗಳಿಂದ ಬಹು ಪ್ರಕಾರವಾಗಿ ಶಾಸ್ತ್ರದಿಂದ ನಿಷಿದ್ಧವಾದ, **ಯದನ್ನಮದ್ಮಿ**=ಯಾವ ಅನ್ನವನ್ನು ಊಟ ಮಾಡಿದ್ದೇನೋ, ಅಥವಾ ವಸ್ತ್ರಾದಿಗಳನ್ನು ನಿಷಿದ್ಧ-ವಾದವುಗಳನ್ನು ಸ್ವೀಕರಿಸಿದ್ದೇನೋ, **ಯದ್ದೇವಾನಾಂ ಚಕ್ಷುಷಿ**=ದೇವತೆಗಳ ಎದುರಿಗೆ ನನ್ನಿಂದ ಮಾಡಲ್ಪಟ್ಟ, **ಆಗಃ**=ಪಾಪವು ಯಾವುದಿದೆಯೋ, ಕಿಂಚಯದೇವ **ಪ್ರತಿಜಗ್ರಾಹಂ**=ಶೂದ್ರಾದಿಗಳಿಂದ ಧನವನ್ನು ದಾನವಾಗಿ ತೆಗೆದುಕೊಂಡಿ-ದ್ದೇನೋ, **ತಸ್ಮಾತ್**=ಈ ಎಲ್ಲಾ ರೀತಿಯ ಪಾಪಗಳಿಂದ ಬಿಡಿಸಿ, **ಮಾಂ**=ನನ್ನನ್ನು, **ಅಗ್ನಿಃ ಅನೃಣಂ ಕರೋತು**=ಅಗ್ನಿದೇವನು ಋಣ ಬಂಧನದಿಂದ ಮುಕ್ತಿಗೊಳಿಸಲಿ.

ದ್ರವ್ಯದೋಷ, ಕರ್ತೃದೋಷ, ದೇಶಕಾಲಾದಿ ದೋಷಗಳಿಂದ ಹಾಗೂ ಇನ್ನೂ ಬೇರೆ ಬೇರೆ ರೀತಿಯಿಂದ ಶಾಸ್ತ್ರನಿಷಿದ್ಧವಾದ ಯಾವ ಅನ್ನವನ್ನು ಊಟ ಮಾಡಿದ್ದೇನೋ, ಅಥವಾ ನಿಷಿದ್ಧವಾದ ವಸ್ತ್ರಾದಿಗಳನ್ನು ಸ್ವೀಕರಿಸಿದ್ದೇನೋ, ಹಾಗೂ ದೇವತೆಗಳ ಎದುರಿಗೆ ಮೂತ್ರ ವಿಸರ್ಜನಾದಿ ಪಾಪಗಳು ನನ್ನಿಂದ ಮಾಡಲ್ಪಟ್ಟಿದ್ದರೆ ಮತ್ತು ಶೂದ್ರಾದಿಗಳಿಂದ ಧನವನ್ನು ಪ್ರತಿಗ್ರಹಿಸಿದ್ದೇನೋ, (ಆಸುರೀ ಸಂಪತ್ತು) ಆ ಎಲ್ಲಾ ರೀತಿಯ ಪಾಪಗಳಿಂದ ಅಗ್ನಿದೇವನು ನನ್ನನ್ನು ಬಿಡಿಸಿ ಋಣ ಮುಕ್ತನನ್ನಾಗಿಸಲಿ. (ಈ ಹನ್ನೆರಡು ಮಂತ್ರಗಳಿಂದ ಉಪಸ್ಥಾನ ಮಾಡಿ ಕುಳಿತುಕೊಂಡು, ಮುಂದಿನ ಮಂತ್ರದಿಂದ ಸಮಿತ್ತನ್ನು ಹೋಮ ಮಾಡಬೇಕು.)

**13. ಯನ್ಮಯಾ ಮನಸಾ ವಾಚಾ ಕೃತಮೇನಃ ಕದಾಚನ । ಸರ್ವಸ್ಮಾತ್ತಸ್ಮಾನ್ಮೇಳಿತೋ ಮೋಗ್ಧಿ ತ್ವಗ್ಂ ಹಿ ವೇತ್ಥ ಯಥಾತಥಮ್ ॥**

**ಮಯಾ**=ನನ್ನಿಂದ (ಯಜಮಾನನಿಂದ) **ಕದಾಚನ**=ಈ ಜನ್ಮದಲ್ಲಿ ಅಥವಾ ಹಿಂದಿನ ಜನ್ಮದಲ್ಲಿಯಾಗಲಿ, **ಮನಸಾ ವಾಚಾ**=ಮನಸ್ಸಿನಿಂದ ಅಥವಾ ಮಾತಿನಿಂದ **ಯದೇನಃ ಕೃತಂ**=ಯಾವ ಪಾಪವು ಮಾಡಲ್ಪಟ್ಟಿದೆಯೋ, ಅಗ್ನಿದೇವನೇ! ನಮ್ಮಿಂದ, **ಈಡಿತಃ**=ಸ್ತುತಿಸಲ್ಪಟ್ಟಂತಹ ನೀನು, **ತಸ್ಮಾತ್ ಸರ್ವಸ್ಮಾತ್**=ಆ ಎಲ್ಲಾ ಪಾಪಗಳಿಂದ, **ಮೋಗ್ಧಿ**=ನಮ್ಮನ್ನು ಬಿಡುಗಡೆಗೊಳಿಸು, **ಹಿ**=ಏಕೆಂದರೆ, ಅಗ್ನಿದೇವನೇ ನೀನು **ಯಥಾತಥಂ ವೇತ್ಥ**=ವಸ್ತು ಸ್ಥಿತಿಯನ್ನು ಸರಿಯಾಗಿ ತಿಳಿದಿದ್ದೀಯೆ. ಅಥವಾ ಯಾವ ಪಾಪಕ್ಕೆ ಯಾವ ಪರಿಹಾರ ಎಂಬುದನ್ನು ತಿಳಿದಿದ್ದೀಯೇ, ಆ ಪಾಪಗಳಿಂದ ನನ್ನನ್ನು ಬಿಡುಗಡೆಗೊಳಿಸು.

ಅಗ್ನಿದೇವನೇ! ಈ ಕೂಶ್ಮಾಂಡ ಹೋಮದ ಅನುಷ್ಠಾನ ಮಾಡುತ್ತಿರುವಂತಹ ನನ್ನಿಂದ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ, ಮನಸ್ಸಿನಿಂದ ಹಾಗು ಮಾತಿನ ಮೂಲಕವಾಗಿ ಮತ್ತು ಶರೀರದಿಂದ (ಕಾರ್ಯಮುಖೇನ) ಯಾವ ಪಾಪವು ಮಾಡಲ್ಪಟ್ಟಿದೆಯೋ, ಆ ಎಲ್ಲಾ ರೀತಿಯ ಪಾಪಗಳಿಂದ ನನ್ನನ್ನು ಬಿಡುಗಡೆ-ಗೊಳಿಸು. ಏಕೆಂದರೆ ಅಗ್ನಿದೇವನೇ! ನೀನು ವಸ್ತುಸ್ಥಿತಿಯನ್ನು ಸರಿಯಾಗಿ ತಿಳಿದವನಾಗಿದ್ದೀಯೆ. ಹಾಗೂ ಯಾವ ಪಾಪಕ್ಕೆ ಯಾವ ಫಲ ಎಂತಲೂ, ಯಾವ ಪಾಪಕ್ಕೆ ಯಾವ ಪರಿಹಾರೋಪಾಯ ಎಂಬುದನ್ನೂ ಚೆನ್ನಾಗಿ ತಿಳಿದವ-ನಾಗಿದ್ದೀಯೆ. ಆ ಎಲ್ಲಾ ಪಾಪಗಳಿಂದ ನನ್ನನ್ನು ಬಿಡುಗಡೆಗೊಳಿಸಿ ನನ್ನನ್ನು ಅನುಗ್ರಹಿಸು.



# ಬೋಧಾಯನೀಯ ಕೂಶ್ಮಾಂಡ ಹೋಮಃ

ಬೋಧಾಯನಾಚಾರ್ಯರು ಧರ್ಮಸೂತ್ರದ ಮೂರನೇ ಪ್ರಶ್ನೆಯ ಏಳನೇ ಅಧ್ಯಾಯದಲ್ಲಿ ಕೂಶ್ಮಾಂಡ ಹೋಮದ ವಿಧಿಯನ್ನು ತಿಳಿಸಿದ್ದಾರೆ.

**''ಅಮಾವಾಸ್ಯಾಯಾಂ ಪೌರ್ಣಮಾಸ್ಯಾಂ ವಾ ಕೇಶಶ್ಮಶ್ರುಲೋಮನಖಾನಿ ವಾಪಯಿತ್ವಾ ಬ್ರಹ್ಮಚಾರಿಕಲ್ಪೇನ ವ್ರತಮುಪೈತಿ'' ॥ 6 ॥** (ಬೋ.ಧ.ಸೂ. 3.7.6)

ಸೂತ್ರ ವ್ಯಾಖ್ಯಾರೂಪವಾದ 'ವಿವರಣ' ಗ್ರಂಥದಲ್ಲಿ (ಗೋವಿಂದ ಸ್ವಾಮಿ ಪ್ರಣೀತ) ಪರ್ವಣ್ಯುಪಕ್ರಮಃ, ಬ್ರಹ್ಮಚಾರಿಕಲ್ಪಃ-ಮಧುಮಾಂಸಾದಿವರ್ಜನಂ, ವ್ರತಂ-ಸಂಕಲ್ಪಃ, ''ಕೂಶ್ಮಾಂಡೈರ್ಹೋಷ್ಯಾಮಿ'' ಇತಿ -ಎಂದು ಸೂತ್ರಾರ್ಥವನ್ನು ತಿಳಿಸಿದ್ದಾರೆ. ನಂತರ-

**ಸಂವತ್ಸರಂ ಮಾಸಂ ಚತುರ್ವಿಂಶತ್ಯಹೋ ದ್ವಾದಶರಾತ್ರೀಃ ಷಟ್ ತಿಸ್ರೋ ವಾ ॥**
(ಬೋ.ಧ.ಸೂ. 3.7.7)

ಈ ಸೂತ್ರದಲ್ಲಿ ವ್ರತಕಲ್ಪವನ್ನು ತಿಳಿಸಿದ್ದಾರೆ. ಪಾಪಗಳಿಗೆ ಅನುಗುಣವಾಗಿ, ಒಂದು ವರ್ಷ ವ್ರತಸ್ಥನಾಗಿ ಪ್ರತಿನಿತ್ಯ ಹೋಮ ಮಾಡುವುದು.

ಒಂದು ತಿಂಗಳು ವ್ರತಸ್ಥನಾಗಿ ಪ್ರತಿನಿತ್ಯ ಹೋಮ ಮಾಡುವುದು.

ಇಪ್ಪತ್ತನಾಲ್ಕು ದಿನ ವ್ರತಸ್ಥನಾಗಿ ಪ್ರತಿನಿತ್ಯ ಹೋಮ ಮಾಡುವುದು.

ಹನ್ನೆರಡು ರಾತ್ರಿ ವ್ರತವನ್ನಾಚರಿಸುತ್ತ ನಿತ್ಯ (ಹಗಲು) ಹೋಮ ಮಾಡುವುದು.

ಮೂರು ರಾತ್ರಿ ವ್ರತವನ್ನಾಚರಿಸುತ್ತ ನಿತ್ಯ (ಹಗಲು) ಹೋಮ ಮಾಡುವುದು.

ಹೀಗೆ ವ್ರತವನ್ನು ತಿಳಿಸಿ, ಮೂರುದಿನವನ್ನೇ ಕೊನೇ ಪಕ್ಷವಾಗಿ ತಿಳಿಸಿರುವುದರಿಂದ ಸಕೃತ್ ಹೋಮವು ಸೂತ್ರ ಸಮ್ಮತವಲ್ಲವೆಂಬುದು ತಿಳಿದುಬರುತ್ತದೆ. ಹಾಗಾಗಿಯೇ ಆಪತ್ಕಕ್ಷದಲ್ಲಿ ಒಂದೇ ದಿನದಲ್ಲಿ ಕೂಶ್ಮಾಂಡ ಹೋಮವನ್ನು ಅನುಷ್ಠಾನ ಮಾಡುವಾಗ ಪೂರ್ವೋತ್ತರಾಂಗಗಳನ್ನು 'ತಂತ್ರೇಣ' ಅನುಷ್ಠಾನ ಮಾಡಿ ಪ್ರಧಾನವಾದ ಕೂಶ್ಮಾಂಡ ಮಂತ್ರಗಳ ಹೋಮವನ್ನು ಮೂರಾವರ್ತಿ ಮಾಡುವ ಒಂದು ಶಿಷ್ಟಸಂಪ್ರದಾಯ ತೋರಿಬರುತ್ತಿದೆ.

ಇಲ್ಲಿ ಸೂತ್ರಕಾರರು-

**ಪೂರ್ವಾಹ್ಣೇ ಪಾಕಯಜ್ಞಧರ್ಮೇಣಾಽಗ್ನಿಮುಪಸಮಾಧಾಯ ಸಂಪರಿಸ್ತೀರ್ಯ ಅಗ್ನಿಮುಖಾತ್ಕೃತ್ವಾ । "ಯದ್ದೇವಾ ದೇವ ಹೇಳನಮ್" "ಯದದೀವ್ಯನ್ನೃಣಮಹಂ ಬಭೂವ" "ಆಯುಷ್ಟೇ ವಿಶ್ವತೋ ದಧತ್" ಇತ್ಯೇತೈಸ್ತ್ರಿಭಿರನುವಾಕ್ಯೈಃ ಪ್ರತ್ಯೃಚಂ ಆಜ್ಯಸ್ಯ ಹುತ್ವಾ "ಸಿಂಹೇ ವ್ಯಾಘ್ರ ಉತಯಾ ಪೃದಾಕೌ" ಇತಿ ಚತಸ್ರಸ್ರುವಾಹುತೀಃ ಜುಹೋತಿ । ಅಗ್ನೇಭ್ಯಾವರ್ತಿನ್ । ಅಗ್ನೇ ಅಂಗಿರಃ । ಪುನರೂರ್ಜಾ ॥ ಸಹ ರಯ್ಯಾ" ಇತಿ ಚತಸ್ರೋಽಭ್ಯಾವರ್ತಿನೀರ್ಹುತ್ವಾ, ಸಮಿತ್ಪಾಣಿರ್ಯಜಮಾನ-ಲೋಕೇಽವಸ್ಥಾಯ "ವೈಶ್ವಾನರಾಯ ಪ್ರತಿವೇದಯಾಮ" ಇತಿ ದ್ವಾದಶರ್ಚೇನ ಸೂಕ್ತೇನೋಪಸ್ಥಾಯ "ಯನ್ಮಯಾ ಮನಸಾ....ಯಥಾತಥಂ॒ಸ್ವಾಹಾ" ಇತಿ ಸಮಿಧಮಾಧಾಯ ವರಂ ದದಾತಿ ॥** (ಬೋ.ಧ.ಸೂ. 3.7.11)

ಎಂಬುದಾಗಿ ತಿಳಿಸಿರುವುದರಿಂದ "ವೈಶ್ವಾನರಾಯ ಪ್ರತಿವೇದಯಾಮೋ" ಇತ್ಯಾದಿ ಹನ್ನೆರಡು ಮಂತ್ರಗಳಿಂದ ಉಪಸ್ಥಾನ ಮತ್ತು ಕೊನೆಯ (ಹದಿಮೂರನೇ) ಮಂತ್ರದಿಂದ ಉಪಸ್ಥಾನ ಸಮಿತ್ತಿನ ಹೋಮ ಎಂಬುದಾಗಿ ಸ್ಪಷ್ಟವಾಗಿ ವಿಭಾಗ ತೋರುತ್ತದೆ. ಹಾಗೂ ವೃತ್ತಿಯಲ್ಲಿ- "ಯಜಮಾನ ಲೋಕೇ ದಕ್ಷಿಣತೋಽಗ್ನೇಃ । ಅನ್ಯತ್ರಾಪ್ಯುಪಸ್ಥಾನಚೋದನಾಯಾಂ ಸಮಿತ್ಪಾಣಿತಾ ಸಮಿದಭ್ಯಾಧಾನಂ ಚ ದ್ರಷ್ಟವ್ಯಮ್ ।" ಎಂದು ತಿಳಿಸಿರುವುದರಿಂದ ಸಮಿತ್ಪಾಣಿ-ಯಾಗಿಯೇ ಉಪಸ್ಥಾನ ಮತ್ತು ಕೊನೆಯ ಮಂತ್ರದಿಂದ ಆ ಉಪಸ್ಥಾನ ಸಮಿತ್ತಿನ ಹೋಮ ಎಂಬುದಾಗಿ ಸ್ಪಷ್ಟವಾಗಿ ತಿಳಿದುಬರುತ್ತದೆ.

## ಬೋಧಾಯನೀಯ ಕೂಶ್ಮಾಂಡ ಹೋಮ ಪ್ರಯೋಗಃ

ಕರ್ತಾ, ಆಚಮ್ಯ, ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ, ಕೂಶ್ಮಾಂಡ ಹೋಮಂ ಕರ್ತುಂ ಶರೀರಶುದ್ಧ್ಯರ್ಥಂ ಸ್ನಾನ ಪವನ ಮಂತ್ರಾಚಮನ ಮಂತ್ರಪ್ರೋಕ್ಷಣಾನಿ ಕರಿಷ್ಯೇ ॥ ಇತಿ ಸಂಕಲ್ಪ್ಯ । ತತ್ಕೃತ್ವಾ ।

ಪುನಃ ಪ್ರಾಣಾನಾಯಮ್ಯ, ದೇಶಕಾಲೌಸಂಕೀರ್ತ್ಯ, ಮಮ ಇಹಜನ್ಮನಿ, ಜನ್ಮಾಂತರೇವಾ ಕೃತ ಸಮಸ್ತ ಪಾಪ ಪರಿಹಾರಾರ್ಥಂ ಶ್ರೀ ಪರಮೇಶ್ವರ ಪ್ರೀತ್ಯರ್ಥಂ (ತ್ರಿಷವಣವಿಧಿನಾ) ಕೂಶ್ಮಾಂಡ ಹೋಮಂ ಕರಿಷ್ಯೆ ॥ ಇತಿ ಸಂಕಲ್ಪ್ಯ ॥ ಗಣಪತಿಂ ಸಂಪೂಜ್ಯ, "ಸವಿತಾ" ಪ್ರೀಯತಾಂ ಇತಿ ಪುಣ್ಯಾಹಂ ವಾಚಯಿತ್ವಾ, ಸ್ಥಂಡಿಲೋಲ್ಲೇಖನಾದಿ ಅಗ್ನಿ ಪ್ರತಿಷ್ಠಾಪನಾಂತಂ ಕೃತ್ವಾ ।

ಅನ್ವಾಧಾನೇ- ಕೂಶ್ಮಾಂಡ ಹೋಮಃ ಕರ್ಮ, ಆಘಾರವತ್ತಂತ್ರಂ, ಚಿತ್ತಿರ್ನಾಮಾಗ್ನಿಃ, ಸವಿತಾ ದೇವತಾ. ಚರುರ್ಹವಿಃ, ಉಪಹೋಮಶ್ಚ ಕೂಶ್ಮಾಂಡ ಮಂತ್ರೈಃ ಆಜ್ಯೇನ ಯಕ್ಷ್ಯೇ, ಅಗ್ನಿ ಸ್ವಿಷ್ಟಕೃತ್ ಇತ್ಯಾದಿ ಸಂಕಲ್ಪ್ಯ, ಅನ್ವಾಧಾನಾದ್ಯಗ್ನಿಮುಖಾಂತಂ ಕೃತ್ವಾ, ಗಾಯತ್ರ್ಯಾ ಪಕ್ವಂ ಹುತ್ವಾ, ಸ್ವಿಷ್ಟಕೃತಮವದಾಯ, ಅಂತಃ ಪರಿಧೌ ನಿಧಾಯ, ಆಜ್ಯಾಹುತೀರುಪಜುಹೋತಿ ।

## (ಕೂಶ್ಮಾಂಡ ಮಂತ್ರ ಸ್ವಾಹಾಕಾರ)

1. ಓಂ ಯದ್ದೇವಾ ದೇವಹೇಳನಂ ದೇವಾಸಶ್ಚಕೃಮಾ ವಯಂ । ಆದಿತ್ಯಾಸ್ತಸ್ಮಾನ್ಮಾ ಮುಂಚತರ್ತಸ್ಯರ್ತೇನ ಮಾಮಿತ ಸ್ವಾಹಾ ॥
ದೇವೇಭ್ಯ ಆದಿತ್ಯೇಭ್ಯ ಇದಂ ನ ಮಮ ॥

2. ದೇವಾ ಜೀವನ ಕಾಮ್ಯಾ ಯದ್ವಾಚಾಽನೃತಮೂದಿಮ । ತಸ್ಮಾನ್ನ ಇಹ ಮುಂಚತ ವಿಶ್ವೇದೇವಾಃ ಸಜೋಷಸಃ ಸ್ವಾಹಾ ॥
ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮ ॥

3. ಋತೇನ ದ್ಯಾವಾಪೃಥಿವೀ ಋತೇನ ತ್ವꣳ ಸರಸ್ವತಿ । ಕೃತಾನ್ನಃ ಪಾಹ್ಯೇನಸೋ ಯತ್ಕಿಂಚಾನೃತಮೂದಿಮ ಸ್ವಾಹಾ ॥
ದ್ಯಾವಾಪೃಥಿವೀಭ್ಯಾಂ ಸರಸ್ವತ್ಯೈ ಚೇದಂ ನ ಮಮ ॥

4. ಇಂದ್ರಾಗ್ನೀ ಮಿತ್ರಾವರುಣೌ ಸೋಮೋ ಧಾತಾ ಬೃಹಸ್ಪತಿಃ । ತೇ ನೋ ಮುಂಚಂತ್ವೇನಸೋ ಯದನ್ಯಕೃತಮಾರಿಮ ಸ್ವಾಹಾ ॥
[1]ಇಂದ್ರಾಗ್ನಿಭ್ಯಾಂ ಮಿತ್ರಾವರುಣಾಭ್ಯಾಂ ಸೋಮಾಯ ಧಾತ್ರೇ ಬೃಹಸ್ಪತಯೇ ಚೇದಂ ನ ಮಮ ॥ (1)

(1) (ಮಂತ್ರ-4) ಮಂತ್ರದಲ್ಲಿ ಭಿನ್ನವಾದ ಅನೇಕ ದೇವಗತೆಗಳ ಪಾಠ ತೋರಿದಲ್ಲಿ, ಉದ್ದೇಶ ತ್ಯಾಗದಲ್ಲಿ ಕೊನೆಯಲ್ಲಿ ಸಮುಚ್ಚಯ ಬೋಧಕ "ಚ"ಕಾರವನ್ನು ಸೇರಿಸಿದಾಗಲೇ ಪ್ರತ್ಯೇಕ ದೇವತೆಗಳಿಗೆ ತ್ಯಾಗದಲ್ಲಿ ಅನ್ವಯ ಬರುತ್ತದೆ. ಹಾಗಾಗಿ ಅಂತಹ ಸ್ಥಳದಲ್ಲಿ ಉದ್ದೇಶ ತ್ಯಾಗದಲ್ಲಿ ಚಕಾರವನ್ನು ಸೇರಿಸಲಾಗಿದೆ. ಉದಾ:- ಮಂತ್ರ-4.

5. ಸಜಾತಶ್ಶಂಸಾದುತ ಜಾಮಿ ಶಂಸಾಜ್ಜ್ಯಾಯಸಃ ಶಂಸಾದುತ ವಾ ಕನೀಯಸಃ । ಅನಾಧೃಷ್ಟಂ ದೇವಕೃತಂ ಯದೇನಸ್ತಸ್ಮಾತ್ತ್ವ ಮಸ್ಮಾಞ್ಜಾತವೇದೋ ಮುಮುಗ್ಧಿ ಸ್ವಾಹಾ ॥

ಜಾತವೇದಸ ಇದಂ ನ ಮಮ ॥

6. ಯದ್ವಾಚಾ ಯನ್ಮನಸಾ ಬಾಹುಭ್ಯಾಮೂರುಭ್ಯಾಮಷ್ಠೀವದ್ಭ್ಯಾಂ ಶಿಶ್ನೈರ್ಯದನೃತಂ ಚಕೃಮಾ ವಯಮ್ । ಅಗ್ನಿರ್ಮಾ ತಸ್ಮಾದೇನಸಃ ಪ್ರಮುಂಚತು ಚಕೃಮ ಯಾನಿ ದುಷ್ಕೃತಾ ಸ್ವಾಹಾ ॥

ಅಗ್ನಯ ಇದಂ ನ ಮಮ ॥

7. ಯೇನ ತ್ರಿತೋ ಅರ್ಣವಾನ್ನಿರ್ಬಭೂವ ಯೇನ ಸೂರ್ಯಂ ತಮಸೋ ನಿರ್ಮುಮೋಚ । ಯೇನೇಂದ್ರೋ ವಿಶ್ವಾ ಅಜಹಾದರಾತೀಸ್ತೇನಾಹಂ ಜ್ಯೋತಿಷಾ ಜ್ಯೋತಿರಾನಶಾನ ಆಕ್ಷಿ ಸ್ವಾಹಾ ॥

ಜ್ಯೋತಿಷ ಇದಂ ನ ಮಮ ॥

8. ಯತ್ಕುಸೀದಮಪ್ರತೀತ್ತಂ ಮಯೇಹ ಯೇನ ಯಮಸ್ಯ ನಿಧಿನಾ ಚರಾಮಿ । ಏತತ್ತದಗ್ನೇ ಅನೃಣೋ ಭವಾಮಿ ಜೀವನ್ನೇವ ಪ್ರತಿ ತತ್ತೇ ದಧಾಮಿ ಸ್ವಾಹಾ ।

ಅಗ್ನಯ ಇದಂ ನ ಮಮ ॥

9. ಯನ್ಮಯಿ ಮಾತಾ ಗರ್ಭೇ ಸತಿ । ಏನಶ್ಚಕಾರ ಯತ್ಪಿತಾ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ

ಚಕೃಮ । ಕರೋತು ಮಾಮನ್ನೇನಸಃ ಸ್ವಾಹಾ ॥

ಅಗ್ನಯೇ ಗಾರ್ಹಪತ್ಯಾಯೇದಂ ನ ಮಮ ॥

10. ಯದಾ ಪಿಪೇಷ ಮಾತರಂ ಪಿತರಮ್ । ಪುತ್ರಃ ಪ್ರಮುದಿತೋ ಧಯನ್ । ಅಹಿಂಸಿತೌ ಪಿತರೌ ಮಯಾ ತತ್ । ತದಗ್ನೇ ಅನೃಣೋ ಭವಾಮಿ ಸ್ವಾಹಾ ॥

ಅಗ್ನಯ ಇದಂ ನ ಮಮ ॥

11. ಯದಂತರಿಕ್ಷಂ ಪೃಥಿವೀಮುತ ದ್ಯಾಮ್ । ಯನ್ಮಾತರಂ ಪಿತರಂ ವಾ ಜಿಹಿಂಸಿಮ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ ಚಕೃಮ । ಕರೋತು ಮಾಮನ್ನೇನಸಃ ಸ್ವಾಹಾ ॥

ಅಗ್ನಯೇ ಗಾರ್ಹಪತ್ಯಾಯೇದಂ ನ ಮಮ ॥

12. ಯದಾಶಸಾ ನಿಶಸಾ ಯತ್ಪರಾಶಸಾ । ಯದೇನಶ್ಚಕೃಮಾ ನೂತನಂ ಯತ್ಪುರಾಣಮ್ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ ಚಕೃಮ । ಕರೋತು ಮಾಮನ್ನೇನಸಃ ಸ್ವಾಹಾ ॥

ಅಗ್ನಯೇ ಗಾರ್ಹಪತ್ಯಾಯೇದಂ ನ ಮಮ ॥

13. ಅತಿಕ್ರಾಮಾಮಿ ದುರಿತಂ ಯದೇನಃ । ಜಹಾಮಿ ರಿಪ್ರಂ ಪರಮೇ ಸಧಸ್ಥೇ । ಯತ್ರ ಯಂತಿ ಸುಕೃತೋ ನಾಪಿ ದುಷ್ಕೃತಃ । ತಮಾರೋಹಾಮಿ ಸುಕೃತಾಂ ನು ಲೋಕಂ ಸ್ವಾಹಾ ॥

ಅಗ್ನಯ ಇದಂ ನ ಮಮ ॥

14. ತ್ರಿತೇ ದೇವಾ ಅಮೃಜತೈತದೇನಃ । ತ್ರಿತ ಏತನ್ಮನುಷ್ಯೇಷು ಮಾಮೃಜೇ । ತತೋ ಮಾ ಯದಿ ಕಿಂಚಿದಾನಶೇ । ಅಗ್ನಿರ್ಮಾ ತಸ್ಮಾದೇನಸಃ । ಗಾರ್ಹಪತ್ಯಃ ಪ್ರಮುಂಚತು । ದುರಿತಾ ಯಾನಿ ಚಕೃಮ । ಕರೋತು ಮಾಮನೇನಸꣳ ಸ್ವಾಹಾ ॥

ಅಗ್ನಯೇ ಗಾರ್ಹಪತ್ಯಾಯೇದಂ ನ ಮಮ ॥

15. ದಿವಿ ಜಾತಾ ಅಪ್ಸು ಜಾತಾಃ । ಯಾ ಜಾತಾ ಓಷಧೀಭ್ಯಃ । ಅಥೋ ಯಾ ಅಗ್ನಿಜಾ ಆಪಃ । ತಾನಃ ಶುಂಧಂತು ಶುಂಧನೀಃ ಸ್ವಾಹಾ ॥

ಅದ್ಭ್ಯಃ ಶುಂಧನೀಭ್ಯ ಇದಂ ನ ಮಮ ॥

16. ಯದಾಪೋ ನಕ್ತಂ ದುರಿತಂ ಚರಾಮ । ಯದ್ವಾ ದಿವಾ ನೂತನಂ ಯತ್ಪುರಾಣಮ್ । ಹಿರಣ್ಯವರ್ಣಾಸ್ತತ ಉತ್ಪುನೀತ ನಃ ಸ್ವಾಹಾ ॥

ಅದ್ಭ್ಯೋ ಹಿರಣ್ಯವರ್ಣಾಭ್ಯ ಇದಂ ನ ಮಮ ॥

17. ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ಸ್ವಾಹಾ ॥

ವರುಣಾಯೇದಂ ನ ಮಮ ॥

18. ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । (2)ಅಹೇಳಮಾನೋ ವರುಣೇಹ ಬೋಧ್ಯುರುಶꣳಸ ಮಾ ನ ಆಯುಃ ಪ್ರಮೋಷೀಃ ಸ್ವಾಹಾ ॥

ವರುಣಾಯೇದಂ ನ ಮಮ ॥

---

(2) ಆರಣ್ಯಕದ "ಸಹ ವೈ" ಪ್ರಶ್ನೆಯಲ್ಲಿ "ಹೇ" "ಮೇ" ವರ್ಣಗಳು ಪೂರ್ವದಲ್ಲಿರುವ "ಡ"ಕಾರವು "ಳ"ಕಾರವಾಗಿ ಪರಿವರ್ತನೆ ಹೊಂದುತ್ತದೆ ಎಂಬುದಾಗಿ "ಆರಣ್ಯಕ ಶಿಕ್ಷೆ"ಯಲ್ಲಿ ವಿಶೇಷ ವಿಧಿ ಇದೆ.

19. ತ್ವನ್ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಳೋಽವಯಾಸಿ-
ಸೀಷ್ಠಾಃ । ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ
ದ್ವೇಷಾꣳಸಿ ಪ್ರಮುಮುಗ್ಧ್ಯಸ್ಮತ್ಸ್ವಾಹಾ ॥

ಅಗ್ನೀವರುಣಾಭ್ಯಾಮಿದಂ ನ ಮಮ ॥

20. ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ
ಉಷಸೋ ವ್ಯುಷ್ಟೌ । ಅವಯಕ್ಷ್ವ ನೋ ವರುಣꣳ ರರಾಣೋ

---

**ಹೇಮೇಪೂರ್ವೇ ಸಹಪ್ರಶ್ನೇ ಪಿತೃಮೇಧಾಂಭಸೋರ್ನನೀ ।**
**ಪ್ರಾಕೃತಸ್ವರಮಧ್ಯಸ್ಥೋ ಡಕಾರೋ ಳತ್ವಮಾಪ್ನುಯಾತ್ ॥** (ಆರಣ್ಯಕ ಶಿಕ್ಷಾ ಶ್ಲೋ-42)

, ಈ ಶ್ಲೋಕದಲ್ಲಿ 'ಸಹ ವೈ' ಪ್ರಶ್ನೆಯಲ್ಲಿ **'ಹೇಮೇ'** ವರ್ಣಗಳು ಪೂರ್ವದಲ್ಲಿರುವ ಡಕಾರವು ಹಾಗೂ ಪಿತೃಮೇಧ ಮತ್ತು ಮಹಾನಾರಾಯಣೀಯಗಳಲ್ಲಿ 'ನ' 'ನೀ' ವರ್ಣಗಳು ಪೂರ್ವದಲ್ಲಿರುವ **'ಡ'**ಕಾರವೂ **'ಳ'**ಕಾರವನ್ನು ಹೊಂದುತ್ತವೆ ಎಂಬುದಾಗಿ ತಿಳಿಸಿದೆ.

ಈ ವಿಶೇಷ ನಿಯಮಕ್ಕನುಗುಣವಾಗಿ ಕೂಶ್ಮಾಂಡ ಹೋಮದಲ್ಲಿ ವಿನಿಯುಕ್ತವಾದ ಸಂಹಿತೆಯಲ್ಲಿ ಪಠಿತವಾದ ಮಂತ್ರಗಳೂ ಸಹ ಆನುಪೂರ್ವಿಯಲ್ಲಿ **'ಡ'**ಕಾರವನ್ನು ಹೊಂದಿದ್ದರೂ ಕೂಶ್ಮಾಂಡ ಹೋಮಾಂಗವಾಗಿ ಪಠಿಸುವಾಗ ಇಲ್ಲಿಯ ನಿಯಮಕ್ಕನುಗುಣವಾಗಿ **'ಳ'**ಕಾರವನ್ನು ಹೊಂದುತ್ತವೆ.

ಉದಾ:- (ಅ) ದೇವಹೇಳನಂ (ಆ) ಮೇಳಿತಃ- ಇವು ಸಹ ವೈ ಪ್ರಶ್ನೆಯಲ್ಲಿ ಉಕ್ತವಾದವುಗಳು.

ಸಂಹಿತಾ ಮಂತ್ರಗಳು– (ಅ) ಅಹೇಳಮಾನೋ (ಆ) ದೇವಸ್ಯ ಹೇಳೋಽವಯಾಸಿಸೀಷ್ಠಾಃ । (ಇ) ಅವತೇ ಹೇಳೋ ವರುಣ ಇತ್ಯಾದಿ.

ಸಂಹಿತಾ ಮಂತ್ರಗಳೂ ಸಹ ಆರಣ್ಯಕಾದಿಗಳಲ್ಲಿ ಹೇಳುವಾಗ (ವಿನಿಯುಕ್ತವಾದಾಗ) ಕೆಲವೆಡೆ ಅನುಪೂರ್ವೀ ವ್ಯತ್ಯಾಸವನ್ನೂ ಸ್ವರವ್ಯತ್ಯಾಸವನ್ನೂ ಹೊಂದುತ್ತವೆ.

ಅದನ್ನೇ-

**ಆರಣ್ಯಾದೌ ದ್ವಯೋಶ್ಚಾಂತೇ ತ್ರಿಷು ಚೈವಂ ವಿಧೀಯತೇ ।**
**ವರ್ಣಾನ್ಯತ್ವಂ ಸ್ವರಾನ್ಯತ್ವಂ ಪಂಚಪ್ರಶ್ನೇಷು ದೃಶ್ಯತೇ ॥** (ಆರಣ್ಯಕ ಶಿಕ್ಷಾ)

ಎಂಬುದಾಗಿ ತಿಳಿಸಿದ್ದಾರೆ.

ವೀಹಿ ಮೃಡೀಕಙ್ ಸುಹವೋ ನ ಏಧಿ ಸ್ವಾಹಾ ॥

ಅಗ್ನೀವರುಣಾಭ್ಯಾಮಿದಂ ನ ಮಮ ॥

21. ತ್ವಮಗ್ನೇ ಅಯಾಸಿ । ಅಯಾಸನ್ಮನಸಾ ಹಿತಃ । ಅಯಾ ಸನ್ಹವ್ಯ-
ಮೂಹಿಷೇ । ಅಯಾನೋ ಧೇಹಿ ಭೇಷಜಙ್ ಸ್ವಾಹಾ ॥

ಅಗ್ನಯೇ ಅಯಸ ಇದಂ ನ ಮಮ ॥

22. ಯದದೀವ್ಯನ್ನೃಣಮಹಂ ಬಭೂವಾದಿತ್ಸನ್ವಾ ಸಂಜಗರ ಜನೇಭ್ಯಃ ।
ಅಗ್ನಿರ್ಮಾ ತಸ್ಮಾದಿಂದ್ರಶ್ಚ ಸಂವಿದಾನೌ ಪ್ರಮುಂಚತಾಙ್ ಸ್ವಾಹಾ ॥

ಅಗ್ನೀಂದ್ರಾಭ್ಯಾಮಿದಂ ನ ಮಮ ॥

23. ಯದ್ಧಸ್ತಾಭ್ಯಾಂ ಚಕರ ಕಿಲ್ಬಿಷಾಣ್ಯಕ್ಷಾಣಾಂ ವಗ್ನುಮುಪ
ಜಿಘ್ನಮಾನಃ । ಉಗ್ರಂಪಶ್ಯಾ ಚ ರಾಷ್ಟ್ರಭೃಚ್ಚ ತಾನ್ಯಪ್ಸರಸಾ-
ವನುದತ್ತಾಮೃಣಾನಿ ಸ್ವಾಹಾ ॥

ಉಗ್ರಂಪಶ್ಯಾರಾಷ್ಟ್ರಭೃದ್ಭ್ಯಾಂ ಅಪ್ಸರೋಭ್ಯಾಮಿದಂ ನ ಮಮ ॥

24. ಉಗ್ರಂಪಶ್ಯೇ ರಾಷ್ಟ್ರಭೃತ್ಕಿಲ್ಬಿಷಾಣಿ ಯದಕ್ಷವೃತ್ತಮನುದತ್ತ-
ಮೇತತ್ । ನೇನ್ನ ಋಣಾನೃಣವ ಇತ್ಸಮಾನೋ ಯಮಸ್ಯ ಲೋಕೇ
ಅಧಿರಜ್ಜುರಾಯ ಸ್ವಾಹಾ ॥

ಉಗ್ರಂಪಶ್ಯಾರಾಷ್ಟ್ರಭೃದ್ಭ್ಯಾಂ ಇದಂ ನ ಮಮ ॥

25. ಅವತೇ ಹೇಳೋ ವರುಣ ನಮೋಭಿರವ ಯಜ್ಞೇಭಿರೀಮಹೇ
ಹವಿರ್ಭಿಃ । ಕ್ಷಯನ್ನಸ್ಮಭ್ಯಮಸುರ ಪ್ರಚೇತೋ ರಾಜನ್ನೇನಾಂಸಿ
ಶಿಶ್ರಥಃ ಕೃತಾನಿ ಸ್ವಾಹಾ ॥

ವರುಣಾಯೇದಂ ನ ಮಮ ॥

26. ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ । ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ಸ್ವಾಹಾ ॥

ವರುಣಾಯೇದಂ ನ ಮಮ ॥

27. ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ಸ್ವಾಹಾ ॥

ವರುಣಾಯೇದಂ ನ ಮಮ ॥

28. ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರಮೋಷೀಃ ಸ್ವಾಹಾ ॥

ವರುಣಾಯೇದಂ ನ ಮಮ ॥

29. ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಳೋಽ-ವಯಾಸಿಸೀಷ್ಠಾಃ । ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಂಸಿ ಪ್ರಮುಮುಗ್ಧ್ಯಸ್ಮತ್ಸ್ವಾಹಾ ॥

ಅಗ್ನೀವರುಣಾಭ್ಯಾಮಿದಂ ನ ಮಮ ॥

30. ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ । ಅವಯಕ್ಷ್ವ ನೋ ವರುಣಂ ರರಾಣೋ ವೀಹಿ ಮೃಡೀಕಂ ಸುಹವೋ ನ ಏಧಿ ಸ್ವಾಹಾ ॥

ಅಗ್ನೀವರುಣಾಭ್ಯಾಮಿದಂ ನ ಮಮ ॥

31. ಸಂಕುಸುಕೋ ವಿಕುಸುಕೋ ನಿರ್ಋಥೋ ಯಶ್ಚ ನಿಸ್ವನಃ ।
ತೇಽಸ್ಮದ್ಯಕ್ಷ್ಮಮನಾಗಸೋ ದೂರಾದ್ದೂರಮಚೀಚತನ್ ಸ್ವಾಹಾ ॥
ಅನಾಗೋಭ್ಯ ಇದಂ ನ ಮಮ ॥

32. ನಿರ್ಯಕ್ಷ್ಮಮಚೀಚತೇ ಕೃತ್ಯಾಂ ನಿರ್ಋತಿಂ ಚ । ತೇನ
ಯೋಽಸ್ಮತ್ಸಮೃಚ್ಛಾತೈ ತಮಸ್ಮೈ ಪ್ರಸುವಾಮಸಿ ಸ್ವಾಹಾ ॥
ಅನಾಗೋಭ್ಯ ಇದಂ ನ ಮಮ ॥ (ಅಪ ಉಪಸ್ಪೃಶ್ಯ)

33. ದುಃಶಂಸಾನುಶಂಸಾಭ್ಯಾಂ ಘಣೇನಾನುಘಣೇನ ಚ ।
ತೇನಾನ್ಯೋಽಸ್ಮತ್ಸಮೃಚ್ಛಾತೈ ತಮಸ್ಮೈ ಪ್ರಸುವಾಮಸಿ ಸ್ವಾಹಾ ॥
ಅನಾಗೋಭ್ಯ ಇದಂ ನ ಮಮ ॥

34. ಸಂ ವರ್ಚಸಾ ಪಯಸಾ ಸಂ ತನೂಭಿರಗನ್ಮಹಿ ಮನಸಾ ಸಂ
ಶಿವೇನ । ತ್ವಷ್ಟಾ ನೋ ಅತ್ರ ವಿದಧಾತು ರಾಯೋಽನುಮಾರ್ಷ್ಟು
ತನ್ವೋ ಯದ್ವಿಲಿಷ್ಟಂ ಸ್ವಾಹಾ ॥
ತ್ವಷ್ಟ್ರ ಇದಂ ನ ಮಮ ॥

35. ಆಯುಷ್ಟೇ ವಿಶ್ವತೋ ದಧದಯಮಗ್ನಿರ್ವರೇಣ್ಯಃ । ಪುನಸ್ತೇ ಪ್ರಾಣ
ಆಯಾತಿ ಪರಾ ಯಕ್ಷ್ಮಂ ಸುವಾಮಿ ತೇ ಸ್ವಾಹಾ ॥
ವರೇಣ್ಯಾಯ ಅಗ್ನಯ ಇದಂ ನ ಮಮ ॥

36. ಆಯುರ್ದಾ ಅಗ್ನೇ ಹವಿಷೋ ಜುಷಾಣೋ ಘೃತಪ್ರತೀಕೋ
ಘೃತಯೋನಿರೇಧಿ । ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ
ಪುತ್ರಮಭಿರಕ್ಷತಾದಿಮಂ ಸ್ವಾಹಾ ॥
ಅಗ್ನಯ ಇದಂ ನ ಮಮ ॥

37. ಇಮಮಗ್ನ ಆಯುಷೇ ವರ್ಚಸೇ ಕೃಧಿ ತಿಗ್ಮಮೋಜೋ ವರುಣ ಸಂ
ಶಿಶಾಧಿ । ಮಾತೇವಾಸ್ಮಾ ಅದಿತೇ ಶರ್ಮ ಯಚ್ಛ ವಿಶ್ವೇದೇವಾ
ಜರದಷ್ಟಿರ್ಯಥಾಽಸತ್ಸ್ವಾಹಾ ॥

ಅಗ್ನಯೇ ವರುಣಾಯ ಅದಿತಯೇ ವಿಶ್ವೇಭ್ಯೋ ದೇವೇಭ್ಯಶ್ಚೇದಂ
ಇದಂ ನ ಮಮ ॥

38. ಅಗ್ನ ಆಯೂಂಷಿ ಪವಸ ಆಸುವೋರ್ಜಮಿಷಂ ಚ ನಃ । ಆರೇ
ಬಾಧಸ್ವ ದುಚ್ಛುನಾಂ ಸ್ವಾಹಾ ॥

ಅಗ್ನಯ ಇದಂ ನ ಮಮ ॥

39. ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಮ್ । ದಧದ್ರಯಿಂ
ಮಯಿ ಪೋಷಂ ಸ್ವಾಹಾ ।

ಅಗ್ನಯ ಇದಂ ನ ಮಮ ॥

40. ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ।
ತಮೀಮಹೇ ಮಹಾಗಯಂ ಸ್ವಾಹಾ ॥

ಅಗ್ನಯ ಇದಂ ನ ಮಮ ॥

41. ಅಗ್ನೇ ಜಾತಾನ್ಪ್ರಣುದಾನಃ ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ
ನುದಸ್ವ । ಅಸ್ಮೇ ದೀದಿಹಿ ಸುಮನಾ ಅಹೇಳಞ್ಛರ್ಮಂತೇ ಸ್ಯಾಮ
ತ್ರಿವರೂಥ ಉದ್ಭೌ ಸ್ವಾಹಾ ॥

ಅಗ್ನಯೇ ಜಾತವೇದಸ ಇದಂ ನ ಮಮ ॥

42. ಸಹಸಾ ಜಾತಾನ್ಪ್ರಣುದಾ ನಃ ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ
ನುದಸ್ವ । ಅಧಿ ನೋ ಬ್ರೂಹಿ ಸುಮನಸ್ಯಮಾನೋ ವಯಂ

ಸ್ಯಾಮ ಪ್ರಣುದಾ ನಃ ಸಪತ್ನಾಂತ್ಸ್ವಾಹಾ ॥

ಜಾತವೇದಸ ಇದಂ ನ ಮಮ ॥

43. ಅಗ್ನೇ ಯೋ ನೋಽಭಿತೋ ಜನೋ ವೃಕೋ ವಾರೋ ಜಿಘಾಂಸತಿ । ತಾಂಸ್ತ್ವಂ ವೃತ್ರಹಞ್ಜಹಿ ವಸ್ವಸ್ಮಭ್ಯಮಾ ಭರ ಸ್ವಾಹಾ ॥

ಅಗ್ನಯೇ ವೃತ್ರಘ್ನ ಇದಂ ನ ಮಮ ॥

44. ಅಗ್ನೇ ಯೋ ನೋಽಭಿದಾಸತಿ ಸಮಾನೋ ಯಶ್ಚ ನಿಷ್ಟ್ಯಃ । ತಂ ವಯಂ ಸಮಿಧಂ ಕೃತ್ವಾ ತುಭ್ಯಮಗ್ನೇಽಪಿ ದಧ್ಮಸಿ ಸ್ವಾಹಾ ॥

ಅಗ್ನಯ ಇದಂ ನ ಮಮ ॥

45. ಯೋ ನಃ ಶಪಾದಶಪತೋ ಯಶ್ಚ ನಃ ಶಪತಃ ಶಪಾತ್ । ಉಷಾಶ್ಚ ತಸ್ಮೈ ನಿಮ್ರುಕ್ಚ ಸರ್ವಂ ಪಾಪಂ ಸಮೂಹತಾಂ ಸ್ವಾಹಾ ॥

ಉಷೋನಿಮ್ರುಗ್ಭ್ಯಾಮಿದಂ ನ ಮಮ ॥

46. ಯೋ ನಃ ಸಪತ್ನೋ ಯೋ ರಣೋ ಮರ್ತೋಽಭಿದಾಸತಿ ದೇವಾಃ । ಇಧ್ಮಸ್ಯೇವ ಪ್ರಕ್ಷಾಯತೋ ಮಾ ತಸ್ಯೋಚ್ಛೇಷಿ ಕಿಂಚನ ಸ್ವಾಹಾ ॥

ದೇವೇಭ್ಯ ಇದಂ ನ ಮಮ ॥

47. ಯೋ ಮಾಂ ದ್ವೇಷ್ಟಿ ಜಾತವೇದೋ ಯಂ ಚಾಹಂ ದ್ವೇಷ್ಮಿ ಯಶ್ಚ ಮಾಮ್ । ಸರ್ವಾಂಸ್ತಾನಗ್ನೇ ಸಂದಹ ಯಾಂಶ್ಚಾಹಂ ದ್ವೇಷ್ಮಿ ಯೇ ಚ ಮಾಂ ಸ್ವಾಹಾ ॥

ಜಾತವೇದಸೇ ಅಗ್ನಯ ಇದಂ ನ ಮಮ ॥

48. ಯೋ ಅಸ್ಮಭ್ಯಮರಾತೀಯಾದ್ಯಶ್ಚ ನೋ ದ್ವೇಷತೇ ಜನಃ ।
ನಿಂದಾದ್ಯೋ ಅಸ್ಮಾನ್ದಿಪ್ಸಾಚ್ಚ ಸರ್ವಾಸ್ತಾನ್ಮಷ್ಮ ಷಾ ಕುರು ಸ್ವಾಹಾ ॥
ಅಗ್ನಯ ಇದಂ ನ ಮಮ ॥

49. ಸಂಶಿತಂ ಮೇ ಬ್ರಹ್ಮ ಸಂಶಿತಂ ವೀರ್ಯಾಂ ಬಲಮ್ । ಸಂಶಿತಂ
ಕ್ಷತ್ರಂ ಮೇ ಜಿಷ್ಣು ಯಸ್ಯಾಹಮಸ್ಮಿ ಪುರೋಹಿತಃ ಸ್ವಾಹಾ ॥
ಅಗ್ನಯ ಇದಂ ನ ಮಮ ॥

50. ಉದೇಷಾಂ ಬಾಹೂ ಅತಿರಮುದ್ವರ್ಚೋ ಅಥೋ ಬಲಮ್ ।
ಕ್ಷಿಣೋಮಿ ಬ್ರಹ್ಮಣಾಽಮಿತ್ರಾನುನ್ನಯಾಮಿ ಸ್ವಾಂ ಅಹಂ
ಸ್ವಾಹಾ ॥
ಅಗ್ನಯ ಇದಂ ನ ಮಮ ॥

51. ಪುನರ್ಮನಃ ಪುನರಾಯುರ್ಮ ಆಗಾತ್ಪುನಶ್ಚಕ್ಷುಃ ಪುನಃ ಶ್ರೋತ್ರಂ
ಮ ಆಗಾತ್ಪುನಃ ಪ್ರಾಣಃ ಪುನರಾಕೂತಂ ಮ ಆಗಾತ್ಪುನಶ್ಚಿತ್ತಂ
ಪುನರಾಧೀತಂ ಮ ಆಗಾತ್ । ವೈಶ್ವಾನರೋ ಮೇಽದಬ್ಧಸ್ತನೂಪಾ
ಅವಬಾಧತಾಂದುರಿತಾನಿ ವಿಶ್ವಾ ಸ್ವಾಹಾ ॥
ವೈಶ್ವಾನರಾಯೇದಂ ನ ಮಮ ॥

(ಇತ್ಯಂತಂ ಏಕಪಂಚಾಶತ್ ಆಹುತೀರ್ಹುತ್ವಾ । ) ಪುನಃ,

1) ಓಂ ಸಿಂಹೇ ವ್ಯಾಘ್ರ ಉತಯಾ ಪೃದಾಕೌ ॥ ತ್ವಿಷಿರಗ್ನೌ ಬ್ರಾಹ್ಮಣೇ ಸೂರ್ಯೇ ಯಾ । ಇಂದ್ರಂ ಯಾ ದೇವೀ ಸುಭಗಾ ಜಜಾನ । ಸಾ ನ ಆಗನ್ವರ್ಚಸಾ ಸಂವಿದಾನಾ ಸ್ವಾಹಾ ॥ ಇಂದ್ರಜನನ್ಯೈ ದೇವ್ಯಾ ಇದಂ ನ ಮಮ ॥

2) ಯಾ ರಾಜನ್ಯೇ ದುಂದುಭಾವಾಯತಾಯಾಮ್ । ಅಶ್ವಸ್ಯ ಕ್ರಂದ್ಯೇ ಪುರುಷಸ್ಯ ಮಾಯೌ । ಇಂದ್ರಂ ಯಾ ದೇವೀ ಸುಭಗಾ ಜಜಾನ । ಸಾ ನ ಆಗನ್ವರ್ಚಸಾ ಸಂವಿದಾನಾ ಸ್ವಾಹಾ ॥ ಇಂದ್ರಜನನ್ಯೈ ದೇವ್ಯಾ ಇದಂ ನ ಮಮ ॥

3) ಯಾ ಹಸ್ತಿನಿ ದ್ವೀಪಿನಿ ಯಾ ಹಿರಣ್ಯೇ । ತ್ವಿಷಿರಶ್ವೇಷು ಪುರುಷೇಷು ಗೋಷು । ಇಂದ್ರಂ ಯಾ ದೇವೀ ಸುಭಗಾ ಜಜಾನ । ಸಾ ನ ಆಗನ್ವರ್ಚಸಾ ಸಂವಿದಾನಾ ಸ್ವಾಹಾ ॥ ಇಂದ್ರಜನನ್ಯೈ ದೇವ್ಯಾ ಇದಂ ನ ಮಮ ॥

4) ರಥೇ ಅಕ್ಷೇಷು ವೃಷಭಸ್ಯ ವಾಜೇ । ವಾತೇ ಪರ್ಜನ್ಯೇ ವರುಣಸ್ಯ ಶುಷ್ಮೇ । ಇಂದ್ರಂ ಯಾ ದೇವೀ ಸುಭಗಾ ಜಜಾನ । ಸಾ ನ ಆಗನ್ವರ್ಚಸಾ ಸಂವಿದಾನಾ ಸ್ವಾಹಾ ॥ ಇಂದ್ರಜನನ್ಯೈ ದೇವ್ಯಾ ಇದಂ ನ ಮಮ ॥

5) ಓಂ ಅಗ್ನೇಽಭ್ಯಾವರ್ತಿನ್ನಭಿನ ಆವರ್ತಸ್ವಾಯುಷಾ ವರ್ಚಸಾ ಸನ್ಯಾ ಮೇಧಯಾ ಪ್ರಜಯಾ ಧನೇನ ಸ್ವಾಹಾ ॥ ಅಗ್ನಯೇ ಅಭ್ಯಾವರ್ತಿನ ಇದಂ ನ ಮಮ॥

6) ಅಗ್ನೇ ಅಂಗಿರಃ ಶತಂ ತೇ ಸಂತ್ವಾವೃತಃ ಸಹಸ್ರಂ ತ ಉಪಾವೃತಃ । ತಾಸಾಂ ಪೋಷಸ್ಯ ಪೋಷೇಣ ಪುನರ್ನೋ ನಷ್ಟಮಾಕೃಧಿ ಪುನರ್ನೋ ರಯಿಮಾ ಕೃಧಿ ಸ್ವಾಹಾ ॥ ಅಗ್ನಯೇ ಆಂಗಿರಸ ಇದಂ ನ ಮಮ ॥

7) ಪುನರೂರ್ಜಾ ನಿವರ್ತಸ್ವ ಪುನರಗ್ನ ಇಷಾಯುಷಾ । ಪುನರ್ನಃ ಪಾಹಿ ವಿಶ್ವತಃ ಸ್ವಾಹಾ ॥ ಅಗ್ನಯ ಇದಂ ನ ಮಮ ॥

8) ಸಹ ರಯ್ಯಾ ನಿವರ್ತಸ್ವಾಗ್ನೇ ಪಿನ್ವಸ್ವ ಧಾರಯಾ । ವಿಶ್ವ ಪ್ಸ್ನಿಯಾ ವಿಶ್ವತಸ್ಪರಿ ಸ್ವಾಹಾ ॥

ಅಗ್ನಯ ಇದಂ ನ ಮಮ ॥ ಓಂ ಭೂ ಸ್ವಾಹಾ ॥ ಅಗ್ನಯ ಇದಂ ನ ಮಮ ॥
ಓಂ ಭುವಃ ಸ್ವಾಹಾ ॥ ವಾಯವ ॥ ಓಂ೯ ಸುವ ಸ್ವಾಹಾ ॥ ಸೂರ್ಯಾಯೇದಂ ॥
ಓಂ ಭೂರ್ಭುವಃ ಸ್ವುವಃ ಸ್ವಾಹಾ ॥ ಪ್ರಜಾಪತಯ ಇದಂ ॥

ಅಥ ಸಮಿತ್ಪಾಣಿಃ ಯಜಮಾನಃ ಅಗ್ನೇರ್ದಕ್ಷಿಣತಃ ತಿಷ್ಠನ್ ಉಪತಿಷ್ಠತೇ–

"ಓಂ ವೈಶ್ವಾನರಾಯ ಪ್ರತಿವೇದಯಾಮೋ ಯದೀನೃಣꣳ ಸಂಗರೋ ದೇವತಾಸು । ಸ ಏತಾನ್ಪಾಶಾನ್ಪ್ರಮುಚನ್ಪ್ರವೇದ ಸ ನೋ ಮುಂಚಾತು ದುರಿತಾದವದ್ಯಾತ್ ॥

ವೈಶ್ವಾನರಃ ಪವಯಾನ್ನಃ ಪವಿತ್ರೈರ್ಯತ್ಸಂಗರಮಭಿಧಾವಾಮ್ಯಾಶಾಮ್ ।
ಅನಾಜಾನನ್ಮನಸಾ ಯಾಚಮಾನೋ ಯದತ್ರೈನೋ ಅವ ತತ್ಸುವಾಮಿ ॥

ಅಮೀ ಯೇ ಸುಭಗೇ ದಿವಿ ವಿಚೃತೌ ನಾಮ ತಾರಕೇ ।
ಪ್ರೇಹಾಮೃತಸ್ಯ ಯಚ್ಛತಾಮೇತದ್ಬದ್ಧಕ ಮೋಚನಮ್ ॥

ವಿಜಿಹೀರ್ಷ್ವ ಲೋಕಾನ್ಕೃಧಿ ಬಂಧಾನ್ಮುಂಚಾಸಿ ಬದ್ಧಕಮ್ ।
ಯೋನೇರಿವ ಪ್ರಚ್ಯುತೋ ಗರ್ಭಃ ಸರ್ವಾನ್ಪಥೋ ಅನುಷ್ವ ॥

ಸ ಪ್ರಜಾನನ್ಪ್ರತಿಗೃಭ್ಣೀತ ವಿದ್ವಾನ್ಪ್ರಜಾಪತಿಃ ಪ್ರಥಮಜಾ ಋತಸ್ಯ ।
ಅಸ್ಮಾಭಿರ್ದತ್ತಂ ಜರಸಃ ಪರಸ್ತಾದಚ್ಛಿನ್ನಂ ತಂತುಮನುಸಂಚರೇಮ ॥

ತತಂ ತಂತುಮನ್ವೇಕೇ ಅನು ಸಂಚರಂತಿ ಯೇಷಾಂ ದತ್ತಂ ಪಿತ್ರ್ಯಮಾಯನವತ್।
ಅಬಂಧ್ವೇಕೇ ದದತಃ ಪ್ರಯಚ್ಛಾದ್ದಾತುಂ ಚೇಚ್ಛಕ್ನವಾꣳ ಸ ಸ್ವರ್ಗ ಏಷಾಮ್ ॥

ಆರಭೇಥಾಮನು ಸꣳ ರಭೇಥಾꣳ ಸಮಾನಂ ಪಂಥಾಮವಥೋ ಘೃತೇನ ।
ಯದ್ವಾಂ ಪೂರ್ತಂ ಪರಿವಿಷ್ಟಂ ಯದಗ್ನೌ ತಸ್ಮೈ ಗೋತ್ರಾಯೇಹ ಜಾಯಾಪತೀ ಸꣳರಭೇಥಾಮ್ ॥

ಯದ್ದಂತರಿಕ್ಷಂ ಪೃಥಿವೀಮುತ ದ್ಯಾಂ ಯನ್ಮಾತರಂ ಪಿತರಂ ವಾ ಜಿಹಿ೯ ಸಿಮ । ಅಗ್ನಿರ್ಮಾತಸ್ಮಾದೇನಸೋ ಗಾರ್ಹಪತ್ಯ ಉನ್ನೋನೇಷದ್ದು ರಿತಾಯಾನಿ ಚಕೃಮ ॥

ಭೂಮಿರ್ಮಾತಾऽದಿತಿರ್ನೋ ಜನಿತ್ರಂ ಭ್ರಾತಾಂऽತರಿಕ್ಷಮಭಿಶಸ್ತ ಏನಃ । ದ್ಯೌರ್ನಃ ಪಿತಾ ಪಿತ್ರಯಾಚ್ಛಂಭವಾಸಿ ಜಾಮಿ ಮಿತ್ವಾ ಮಾ ವಿವಿತ್ಸಿ ಲೋಕಾತ್ ॥

ಯತ್ರ ಸುಹಾರ್ದಃ ಸುಕೃತೋ ಮದಂತೇ ವಿಹಾಯ ರೋಗಂ ತನ್ವಾ೨೯ ಸ್ವಾಯಾಮ್ । ಅಶ್ಲೋಣಾಂಗೈರಹ್ರುತಾಃ ಸ್ವರ್ಗೇ ತತ್ರ ಪಶ್ಯೇಮ ಪಿತರಂ ಚ ಪುತ್ರಮ್ ॥

ಯದನ್ನಮದ್ಮ್ಯನೃತೇನ ದೇವಾ ದಾಸ್ಯನ್ನದಾಸ್ಯನ್ನುತ ವಾऽಕರಿಷ್ಯನ್ । ಯದ್ದೇವಾನಾಂ ಚಕ್ಷುಷ್ಯಾಗೋ ಅಸ್ತಿ ಯದ್ದೇವ ಕಿಂಚ ಪ್ರತಿಜಗ್ರಾಹ-ಮಗ್ನಿರ್ಮಾ ತಸ್ಮಾದನೃಣಂ ಕೃಣೋತು ॥

ಯದನ್ನಮದ್ಮಿ ಬಹುಧಾ ವಿರೂಪಂ ವಾಸೋ ಹಿರಣ್ಯಮುತ ಗಾಮ ಜಾಮವಿಮ್ । ಯದ್ದೇವಾನಾಂ ಚಕ್ಷುಷ್ಯಾಗೋ ಅಸ್ತಿ ಯದ್ದೇವ ಕಿಂಚ ಪ್ರತಿಜಗ್ರಾಹಮಗ್ನಿರ್ಮಾ ತಸ್ಮಾದನೃಣಂ ಕೃಣೋತು ॥''

(ಇತ್ಯೃತೇನ ದ್ವಾದಶರ್ಚೇನ ಸೂಕ್ತೇನ ಉಪಸ್ಥಾಯ, ಅಥೋಪವಿಶ್ಯ)

ಓಂ ಯನ್ಮಯಾ ಮನಸಾ ವಾಚಾ ಕೃತಮೇನಃ ಕದಾಚನ ।

ಸರ್ವಸ್ಮಾತ್ತಸ್ಮಾನ್ಮೇಳಿತೋ ಮೋಗ್ಧಿ ತ್ವꣳ ಹಿ ವೇತ್ಥ ಯಥಾತಥꣳ ಸ್ವಾಹಾ ॥

ಅಗ್ನಯೇ ವೈಶ್ವಾನರಾಯೇದಂ ನ ಮಮ ॥ ಇತಿ ಸಮಿಧಂ ಹುತ್ವಾ ॥

ಅಥ ಸ್ವಿಷ್ಟಕೃದಾದಿ ವರದಾನಾಂತಂ ಕೃತ್ವಾ, ಅಗ್ರೇಣಾಗ್ನಿಂ ಅಶ್ವತ್ಥ ಪರ್ಣೇಷು ಗಾಯತ್ರ್ಯಾ ಹುತಶೇಷಂ ನಿದಧಾತಿ । ತತಃ ಉತ್ತರಪರಿಷೇಕಾದಿಕಂ ಕೃತ್ವಾ, ಕರ್ಮೇಶ್ವರಾರ್ಪಣಂ ಕೃತ್ವಾ, ಬ್ರಾಹ್ಮಣಾನ್ಭೋಜಯೇತ್ ॥

ಇತಿ ಬೋಧಾಯನೀಯ ಕೂಶ್ಮಾಂಡ ಹೋಮಃ ॥